# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಮಾರ್ಚ್ ೧೦, ೨೦೧೬ (ಫಾಲ್ಗುಣ ೨೦, ಶಕ ವರ್ಷ ೧೯೩೭)<br>Bengaluru, Thursday, March 10, 2016 (Phalguna 20, Shaka Varsha 1937) | ಸಂಚಿಕೆ ೧೦<br>Issue 10 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಐ 125 ಎಸ್‌ಜಿಎಫ್ 2015, ಬೆಂಗಳೂರು, ದಿನಾಂಕ 08/12/2015**

1) ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿ., ಈ ಹೊಸ ಸಕ್ಕರೆ ಕಾರ್ಖಾನೆಗೆ ಭಾರತ ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯದ ಆದೇಶ ಸಂಖ್ಯೆ:244/ಎಸ್‌ಐಎ/ಐಎಂಒ/2015, ದಿನಾಂಕ 17/2/2015 ರಲ್ಲಿ ಐಇಎಂ ನೀಡಲಾಗಿದೆ. ಕರ್ನಾಟಕ ರಾಜ್ಯ ಉನ್ನತ ಮಟ್ಟದ ಸಮಿತಿಯು ಈ ಕಾರ್ಖಾನೆಗೆ 5000 ಟಿಸಿಡಿ ಸಾಮರ್ಥ್ಯ ಹಾಗೂ 30 ಮೆ.ವ್ಯಾಟ್ ಸಾಮರ್ಥ್ಯದ ಸಹ–ವಿದ್ಯುತ್ ಘಟಕಕ್ಕೆ ರೂ. 213.00 ಕೋಟಿಗಳ ಬಂಡವಾಳ ಹೂಡಿಕೆಯೊಂದಿಗೆ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: CI 173 SPI 2015, ದಿನಾಂಕ 10/07/2015 ರಲ್ಲಿ ತಾತ್ವಿಕ ಅನುಮೋದನೆ ನೀಡಲಾಗಿದೆ.

2) ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿಮಿಟೆಡ್, ಸವದತ್ತಿ, ಸವದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ, ಈ ಕಾರ್ಖಾನೆಗೆ ಕಬ್ಬು ಕ್ಷೇತ್ರ ನಿಗದಿಪಡಿಸುವ ಸಂಬಂಧ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ 15/06/2015ರ ಪ್ರಸ್ತಾವನೆಯಲ್ಲಿ ಸದರಿ ಸ್ಥಳದಿಂದ 7.5 ಕಿ.ಮೀ ವ್ಯಾಪ್ತಿಯೊಳಗೆ ಬರುವ ಮೆ॥ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಸಿದ್ದಸಮುದ್ರ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 6 ಗ್ರಾಮಗಳು ಮತ್ತು ಶ್ರೀ ರೇಣುಕಾ ಶುಗರ್ಸ್ ಲಿ., ಮುನವಳ್ಳಿ, ಸೌದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 2 ಗ್ರಾಮಗಳೂ ಸೇರಿದಂತೆ 8 ಗ್ರಾಮಗಳನ್ನು ಸಂಬಂಧಪಟ್ಟ ಕಾರ್ಖಾನೆಗಳಿಂದ ಹಿಂದಕ್ಕೆ ಪಡೆದು ಹಾಗೂ ಯಾವುದೇ ಕಾರ್ಖಾನೆಗೆ ಹಂಚಿಕೆಯಾಗದಿರುವ 9 ಗ್ರಾಮಗಳು ಸೇರಿದಂತೆ ಒಟ್ಟು ಸವದತ್ತಿ ತಾಲ್ಲೂಕಿನ 17 ಗ್ರಾಮಗಳನ್ನು ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿಮಿಟೆಡ್., ಸವದತ್ತಿ ತಾಲ್ಲೂಕು ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ನಿಗಧಿಪಡಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

3) ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಮತ್ತು ಹಾಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಿಸುವ ಬಗ್ಗೆ ರಾಜ್ಯ ಸರ್ಕಾರದ ನೀತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ದಿನಾಂಕ 11/9/2007 ರಲ್ಲಿ ಪ್ರಕಟಿಸಲಾಗಿದೆ. ಅದರಂತೆ ಹೊಸ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬಿನ ಮೀಸಲು ಕ್ಷೇತ್ರವನ್ನು 15 ಕಿ.ಮೀ ಅಂತರದೊಳಗೆ ಹಂಚಿಕೆ ಮಾಡತಕ್ಕದ್ದು. ಒಂದು ವೇಳೆ 15 ಕಿ.ಮೀ. ಅಂತರದೊಳಗೆ ಸಾಕಷ್ಟು ಕಬ್ಬು ದೊರೆಯದಿದ್ದಲ್ಲಿ 15 ಕಿ.ಮೀ. ಹೊರಗಿನ ಕಬ್ಬಿನ ಮೀಸಲು ಕ್ಷೇತ್ರವನ್ನು ಹಂಚಿಕೆ ಮಾಡಬಹುದು. ಆದರೆ, ಈ ರೀತಿ ಹಂಚಿಕೆ ಮಾಡಲಾದ ಪ್ರದೇಶವು ಹಾಲಿ ಇರುವ ಬೇರೆ ಸಕ್ಕರೆ ಕಾರ್ಖಾನೆಗಳ 15 ಕಿ.ಮೀ. ವ್ಯಾಪ್ತಿಯ ಹೊರಗಡೆ ಇರತಕ್ಕದ್ದು ಎಂದು ನಿಗದಿಪಡಿಸಿದೆ.

4) ಭಾರತ ಸರ್ಕಾರವು ಹೊರಡಿಸಿರುವ 'ಕಬ್ಬು (ನಿಯಂತ್ರಣ) ಆದೇಶ, 1966' ರ ಕಂಡಿಕೆ 6ರಲ್ಲಿ ಕಬ್ಬು ವಿತರಣೆ ಮತ್ತು ಸಾಗಾಟವನ್ನು ಕೇಂದ್ರ ಸರ್ಕಾರಕ್ಕೆ ಅಧಿಕಾರ ನೀಡಲಾಗಿದ್ದು, ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಈ ಅಧಿಕಾರವನ್ನು ಮರು ಹಂಚಿಕೆ ಮಾಡಿರುತ್ತದೆ. ಅದರಂತೆ ಮೆ॥ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಸಿದ್ದಸಮುದ್ರ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 6 ಗ್ರಾಮಗಳು ಮತ್ತು ಶ್ರೀ ರೇಣುಕಾ ಶುಗರ್ಸ್ ಲಿ., ಮುನವಳ್ಳಿ, ಸೌದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 2 ಗ್ರಾಮಗಳು ಸೇರಿದಂತೆ 8 ಗ್ರಾಮಗಳನ್ನು ಸಂಬಂಧಪಟ್ಟ ಕಾರ್ಖಾನೆಗಳಿಂದ ಹಿಂದಕ್ಕೆ ಪಡೆದು ಹಾಗೂ ಯಾವುದೇ ಕಾರ್ಖಾನೆಗೆ ಹಂಚಿಕೆಯಾಗದಿರುವ 9 ಗ್ರಾಮಗಳು ಸೇರಿದಂತೆ ಒಟ್ಟು ಸವದತ್ತಿ ತಾಲ್ಲೂಕಿನ 17 ಗ್ರಾಮಗಳನ್ನು ಸಂಬಂಧಪಟ್ಟ ಕಾರ್ಖಾನೆಗಳಿಂದ ಹಿಂಪಡೆದು ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿಮಿಟೆಡ್., ಸವದತ್ತಿ, ಸವದತ್ತಿ ತಾಲ್ಲೂಕು ಬೆಳಗಾವಿ ಜಿಲ್ಲೆ, ಇಲ್ಲಿ ಸ್ಥಾಪಿಸಲಿರುವ ಹೊಸ ಸಕ್ಕರೆ ಕಾರ್ಖಾನೆಗೆ ಅದರ 7.5 ಕಿ.ಮೀ ವ್ಯಾಪ್ತಿಯೊಳಗೆ ಬರುವ ಈ ಕೆಳಕಂಡ 17 ಗ್ರಾಮಗಳನ್ನು ಕಬ್ಬು ಮೀಸಲು ಕ್ಷೇತ್ರವನ್ನಾಗಿ ಹಂಚಿಕೆ ಮಾಡಿದೆ.

| ಕ್ರ. ಸಂ | ಗ್ರಾಮಗಳ ಹೆಸರು | ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿ, ನಿಂದ ಅಂತರ (ಕಿ.ಮೀ) ಗಳಲ್ಲಿ | ಯಾವ ಕಾರ್ಖಾನೆಯಿಂದ ಹಿಂಪಡೆಯಲಾಗಿದೆ |
|---|---|---|---|
| 1 | ಅಸುಂಡಿ | 3.30 | |
| 2 | ಮುಗಳಿ | 4.80 | |
| 3 | ಶಿಂಗಾರಗೊಪ್ಪ | 5.07 | |
| 4 | ಸುತಗಟ್ಟಿ | 7.47 | |
| 5 | ಏಣಗಿ | 7.48 | |
| 6 | ಹಿಟ್ಟಣಗಿ | 7.44 | |
| 7 | ಗೋವನಕೊಪ್ಪ ಕೆ.ವೈ | 7.50 | |
| 8 | ಬಮಗುಂಡಿಕೊಪ್ಪ | 6.35 | |
| 9 | ಗುರ್ಲಹೊಸೂರು | 5.85 | |
| 10 | ಕೆಂಚಲಾರಕೊಪ್ಪ | 6.55 | ರೇಣುಕಾ ಶುಗರ್ಸ್ ಲಿ., |
| 11 | ಸವದತ್ತಿ | 7.26 | ರೇಣುಕಾ ಶುಗರ್ಸ್ ಲಿ., |
| 12 | ನಡುವಿನಹಳ್ಳಿ | 6.18 | ಸೋಮೇಶ್ವರ ಶುಗರ್ಸ್ ಲಿ., |
| 13 | ಕಡೆಹಳ್ಳಿ | 7.43 | ಸೋಮೇಶ್ವರ ಶುಗರ್ಸ್ ಲಿ., |
| 14 | ಇನಾಂಹೊಂಗಲ | 7.50 | ಸೋಮೇಶ್ವರ ಶುಗರ್ಸ್ ಲಿ., |
| 15 | ಕೆಂಚರಾಮನಹಾಳ | 6.80 | ಸೋಮೇಶ್ವರ ಶುಗರ್ಸ್ ಲಿ., |
| 16 | ಯಡಹಳ್ಳಿ | 7.48 | ಸೋಮೇಶ್ವರ ಶುಗರ್ಸ್ ಲಿ., |
| 17 | ಸಂಗ್ರೇಶಕೊಪ್ಪ | 7.45 | ಸೋಮೇಶ್ವರ ಶುಗರ್ಸ್ ಲಿ., |

5) ಮೇಲ್ಕಂಡ ಕಬ್ಬು ಮೀಸಲು ಕ್ಷೇತ್ರ ಹಂಚಿಕೆಯು ಕೇಂದ್ರ ಸರ್ಕಾರ/ರಾಜ್ಯ ಸರ್ಕಾರ ಕಾಲ ಕಾಲಕ್ಕೆ ಹೊರಡಿಸುವ ಅಧಿನಿಯಮ/ ನಿಯಮಗಳು/ ಸೂಚನೆಗಳಿಗೆ ಹಾಗೂ ಈ ಕೆಳಕಂಡ ಷರತ್ತಿಗಳಿಗೆ ಒಳಪಟ್ಟಿರುತ್ತದೆ.

ಎ) ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿ., ಕಾರ್ಖಾನೆಯು ಕಾರ್ಖಾನೆ ನಡೆಸಲು ಅಗತ್ಯವಿರುವ ಭಾರತ ಸರ್ಕಾರ/ಸಕ್ಷಮ ಪ್ರಾಧಿಕಾರವು ನೀಡುವ ಚಾಲ್ತಿಯಲ್ಲಿರುವ ಕೈಗಾರಿಕಾ ಲೈಸೆನ್ಸ್‌ನ್ನು ಹೊಂದಿರತಕ್ಕದ್ದು.

ಬಿ) ಕಬ್ಬು ಮೀಸಲು ಕ್ಷೇತ್ರಗಳನ್ನು ಹಂಚಿಕೆ ಪಡೆದ ಕಾರ್ಖಾನೆಯು ಮೇಲೆ ನಿಗದಿಪಡಿಸಿರುವ ಪ್ರದೇಶದಿಂದಲೇ ಕಬ್ಬನ್ನು ಪಡೆಯತಕ್ಕದ್ದು.

ಸಿ) ಮೆ॥ ಹರ್ಷ ಶುಗರ್ಸ್ ಪ್ರೈವೇಟ್ ಲಿ., ಕಾರ್ಖಾನೆಯ ಕಬ್ಬು ನುರಿಸುವ ಸಾಮರ್ಥ್ಯವು 5000 ಟಿಸಿಡಿ ಇದ್ದು, ಸದರಿ ಕಾರ್ಖಾನೆಗೆ ವಾರ್ಷಿಕವಾಗಿ ಲಭ್ಯವಾಗುವ ಕಬ್ಬಿನ ಪ್ರಮಾಣವು 5.02 ಲಕ್ಷ ಮೆ.ಟನ್ ಇರುತ್ತದೆ. ಈ ಕಾರ್ಖಾನೆಯು ಸ್ಥಾಪನೆಯಾಗುವವರೆಗೆ, ತಾತ್ಕಾಲಿಕವಾಗಿ ಈ ಹಿಂದೆ ಹಂಚಿಕೆ ಮಾಡಿದ್ದ ಕಾರ್ಖಾನೆಗಳು ಕಬ್ಬನ್ನು ರೈತರಿಂದ ಖರೀದಿಸಬಹುದಾಗಿದೆ.

ಡಿ) ಕಬ್ಬು ಮೀಸಲು ಪ್ರದೇಶದಲ್ಲಿನ ಪ್ರತಿ ಕಬ್ಬು ಬೆಳೆಗಾರ ಅಥವಾ ಪ್ರತಿ ಕಬ್ಬು ಬೆಳೆಗಾರರ ಸಹಕಾರಿ ಸಂಘವು ಮೇಲ್ಕಂಡ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ಕಬ್ಬಿನ ಪ್ರಮಾಣದ ಬಗ್ಗೆ ಕಾರ್ಖಾನೆಯು ಒಪ್ಪಂದ ಮಾಡಿಕೊಳ್ಳುವುದು.

ಇ) ಮೇಲ್ಕಂಡ ಕಬ್ಬು ಮೀಸಲು ಪ್ರದೇಶದಿಂದ ಮೇಲೆ ಹಂಚಿಕೆ ಮಾಡಲಾದ ಕಾರ್ಖಾನೆಗೆ ಹೊರತುಪಡಿಸಿ ಹೊರಗಿನ ಪ್ರದೇಶಕ್ಕೆ ಯಾವುದೇ ಕಾರಣಕ್ಕೂ ಜಿಲ್ಲಾಧಿಕಾರಿಗಳ ಆದೇಶವಿಲ್ಲದೆ ಸಾಗಣೆ ಮಾಡುವ ಹಾಗಿಲ್ಲ.

ಎಫ್) ಯಾವುದೇ ಸಕ್ಕರೆ ಕಾರ್ಖಾನೆಯು ತನಗೆ ಹಂಚಿಕೆಯಾದ ಕಬ್ಬು ಮೀಸಲು ಪ್ರದೇಶವನ್ನು ಹೊರತುಪಡಿಸಿ ಬೇರೆ ಪ್ರದೇಶಗಳಲ್ಲಿ ಬೆಳೆದಿರುವ ಕಬ್ಬನ್ನು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಖರೀದಿಸಿದಲ್ಲಿ ಅಂತಹ ಕಾರ್ಖಾನೆಗಳ ವಿರುದ್ಧ ನಿಯಮಾನುಸಾರ ಕ್ರಮ ಜರುಗಿಸಲಾಗುವುದು.

ಜಿ) ಕಬ್ಬು ಸಾಗಣೆ ಮಾಡಲು ಪರವಾನಿಗೆ ಮಂಜೂರಾತಿ ಅರ್ಜಿಯನ್ನು ನಮೂನೆ–2ರಲ್ಲಿ ರೂ.5/– ಶುಲ್ಕ ಮತ್ತು ರೂ.100/– ಭದ್ರತಾ ಠೇವಣಿ ಶುಲ್ಕದೊಂದಿಗೆ ಸಲ್ಲಿಸತಕ್ಕದ್ದು. ಒಪ್ಪಂದದ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಆ ಬಗ್ಗೆ ಜಿಲ್ಲಾಧಿಕಾರಿಯು ಸಂಬಂಧಪಟ್ಟವರಿಗೆ ಕಾರಣ ಕೇಳುವ ನೋಟಿಸು ಜಾರಿ ಮಾಡಿ, ಹೇಳಿಕೆ ಪಡೆದು ಸೂಕ್ತವೆಂದು ಕಂಡುಬಂದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಕ್ತ ಆದೇಶ ಹೊರಡಿಸಬಹುದು.

ಹೆಚ್) ಈ ಅಧಿಸೂಚನೆ ಮೂಲಕ ಹಂಚಿಕೆ ಮಾಡಿರುವ ಕಬ್ಬು ಮೀಸಲಾತಿ ಪ್ರದೇಶಗಳನ್ನು ಪರಿಷ್ಕರಿಸುವ ಅಥವಾ ರದ್ದುಪಡಿಸುವ ಹಕ್ಕನ್ನು ರಾಜ್ಯ ಸರ್ಕಾರ ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಆರ್.ನರಸಿಂಹಮೂರ್ತಿ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸಕ್ಕರೆ)(ಪ್ರ)

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

PR. 37

SC. 200

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಪಿಕಾರ್ಡ್ ಬ್ಯಾಂಕ್ ಹಾಗೂ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಕೊಳವೆ ಬಾವಿಗಳಿಗೆ ಸಾಲ ಪಡೆದು ವಿಫಲವಾಗಿರುವ ಯೋಜನೆಗಳ ಸಾಲ ಮನ್ನಾಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಒ 144 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:20.08.2015
2. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2015, ದಿನಾಂಕ:09.10.2015
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂ:ಆರ್‌ಸಿಎಸ್/ ಎಲ್‌ಡಿಬಿ–4/76/2014–15, ದಿನಾಂಕ:09.12.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿರುವ ಪಿಕಾರ್ಡ್ ಬ್ಯಾಂಕುಗಳ ಮೂಲಕ ಕೃಷಿ ಉದ್ದೇಶದ ಕೊಳವೆ ಬಾವಿಗಳಿಗೆ ನೀಡಲಾದ ಸಾಲಗಳಲ್ಲಿ, ವಿಫಲ ಕೊಳವೆ ಬಾವಿಗಳ ಸಾಲಗಳನ್ನು ಮನ್ನಾ ಮಾಡಲು ಆಯವ್ಯಯ "ಲೆಕ್ಕ ಶೀರ್ಷಿಕೆ 2425–00–107–2–46–106" ರಲ್ಲಿ ಒದಗಿಸಲಾಗಿರುವ ರೂ.200.00 ಲಕ್ಷಗಳ ಅನುದಾನದ ಮಿತಿಯೊಳಗೆ ಕೆಲವೊಂದು ಷರತ್ತು/ಮಾನದಂಡಗಳನ್ನು ವಿಧಿಸಿ ಯೋಜನೆಯನ್ನು ಜಾರಿಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2 ಕಂತುಗಳಲ್ಲಿ ಬಿಡುಗಡೆಗೊಳಿಸಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ತ್ರಿಸದಸ್ಯ ಸಮಿತಿ ದೃಢೀಕರಿಸಿ ಸಲ್ಲಿಸಿರುವ 3 ಜಿಲ್ಲೆಗಳ 831 ವಿಫಲ ಬಾವಿ ಪ್ರಕರಣಗಳಿಗೆ ಸಂಬಂಧಿಸಿದಂತೆ ರೂ.1,96,89,425/– ಗಳ ಕ್ಲೈಂ ಬಿಲ್ಲುಗಳನ್ನು ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 144 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 26.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿರುವ ಪಿಕಾರ್ಡ್ ಬ್ಯಾಂಕುಗಳ ಮೂಲಕ ಕೃಷಿ ಉದ್ದೇಶದ ಕೊಳವೆ ಬಾವಿಗಳಿಗೆ ನೀಡಲಾದ ಸಾಲಗಳಲ್ಲಿ, ವಿಫಲ ಕೊಳವೆ ಬಾವಿಗಳ ಸಾಲಗಳನ್ನು ಮನ್ನಾ ಮಾಡಲು ಆಯವ್ಯಯ "ಲೆಕ್ಕ ಶೀರ್ಷಿಕೆ 2425–00–107–2–46–106" ರಲ್ಲಿ ಒದಗಿಸಲಾಗಿರುವ ರೂ.200.00 ಲಕ್ಷಗಳ ಪೈಕಿ ರೂ.100.00 ಲಕ್ಷಗಳನ್ನು ಸರ್ಕಾರದ ಆದೇಶ ಸಂಖ್ಯೆ:ಸಿಒ 144 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:20.08.2015 ರ ಆದೇಶದ ಅನುಬಂಧದಲ್ಲಿನ ಷರತ್ತು / ಮಾನದಂಡಗಳಿಗೊಳಪಟ್ಟು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಕಸ್ಕಾರ್ಡ್ ಬ್ಯಾಂಕಿಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.,

1. ಮೊದಲ ಹಂತದಲ್ಲಿ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಅಪರ ನಿಬಂಧಕರು(ಪತ್ತು) ಇವರ ಮೂಲಕ ಸರ್ಕಾರಕ್ಕೆ ವರದಿ ಮಾಡಿರುವಂತೆ ದಿನಾಂಕ:31.03.2015 ಕ್ಕೆ ಬಾಕಿಯಿರುವ 4552 ಪ್ರಕರಣಗಳಿಗೆ ಆದ್ಯತೆ ಮೇಲೆ ಜಿಲ್ಲಾವಾರು ಹಣ ಬಿಡುಗಡೆಗೊಳಿಸತಕ್ಕದ್ದು.
2. ತ್ರಿ–ಸದಸ್ಯ ಅಧಿಕಾರ ಸಮಿತಿ ದೃಢೀಕರಿಸಿರುವ ಪ್ರಕರಣಗಳ ಪೈಕಿ ಕನಿಷ್ಟ ಶೇ.5ರಷ್ಟು ಪ್ರಕರಣಗಳನ್ನು ಜಿಲ್ಲೆಯ ಉಪ ನಿಬಂಧಕರು ಖುದ್ದು ಪರಿಶೀಲನೆ ನಡೆಸಿರುವ ಬಗ್ಗೆ ಖಾತ್ರಿ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2015, ದಿನಾಂಕ:09.10.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 162 ಆಂಆಸ 2015, ದಿನಾಂಕ:22.12.2015 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 54**

**SC. 50**

## ಸಹಕಾರ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಒ 145 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 19.12.2015.**

ಸರ್ಕಾರದ ಆದೇಶ ಸಂಖ್ಯೆ:ಸಿಒ 145 ಸಿಎಲ್ಎಸ್ 2015, ದಿನಾಂಕ:08.10.2015 ರ ಆದೇಶದ ಅನುಬಂಧದ ಕಂಡಿಕೆ 9 ರಲ್ಲಿ **"ಮೇಲೆ ತಿಳಿಸಿದ ರೈತರು ಬೆಳೆದ ಕೃಷಿ ಉತ್ಪನ್ನಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳನ್ನು ಖರೀದಿಸಿ ನೀಡುವ ಯೋಜನೆ ಇದಾಗಿದ್ದು ಈ ಯಂತ್ರಗಳನ್ನು ರಾಜ್ಯ ಮಟ್ಟದಲ್ಲಿ ಸಹಕಾರ ಸಂಘಗಳ ನಿಬಂಧಕರು, ಕೃಷಿ ನಿರ್ದೇಶಕರನ್ನೊಳಗೊಂಡ ಖರೀದಿ ಸಮಿತಿ ರಚಿಸಿ ಆ ಸಮಿತಿಯು ರಾಜ್ಯದಲ್ಲಿರುವ ಎಲ್ಲಾ ಜಿಲ್ಲೆಗಳಲ್ಲಿ ಅಗತ್ಯವಿರುವ ಈ ಯೋಜನೆಯಲ್ಲಿ ತಿಳಿಸಿರುವ ಯಂತ್ರೋಪಕರಣಗಳ ಖರೀದಿಯನ್ನು ನಿರ್ಧರಿಸತಕ್ಕದ್ದು"** ಎಂದು ನಮೂದಿಸಲಾಗಿದ್ದು, ಇದರ ಬದಲಿಗೆ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದ್ದು, ಅದರಂತೆ, ಓದಿಕೊಳ್ಳತಕ್ಕದ್ದು.

**"ಮೇಲೆ ತಿಳಿಸಿದ ರೈತರು ಬೆಳೆದ ಕೃಷಿ ಉತ್ಪನ್ನಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳನ್ನು ಖರೀದಿಸಿ ನೀಡುವ ಯೋಜನೆ ಇದಾಗಿದ್ದು ಸಂಘದ ಸದಸ್ಯರಿಗೆ ಅನುಕೂಲ ಕಲ್ಪಿಸಲು ಅಗತ್ಯವಿರುವ ಕೃಷಿ ಉತ್ಪನ್ನಗಳ ಶುದ್ಧೀಕರಣ/ವರ್ಗೀಕರಣ ಯಂತ್ರಗಳನ್ನು ಆಯ್ಕೆ ಮಾಡಿ ತಯಾರಕರಿಂದ/ವಿತರಕರಿಂದ ಯಂತ್ರಗಳ ಸರಬರಾಜಿಗೆ ಟೆಂಡರ್‌ಗಳನ್ನು ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟಿಸಿ ಪಾರದರ್ಶಕ ಕಾಯ್ದೆಯನ್ವಯ ಪರಿಶೀಲಿಸಿ ಜಿಲ್ಲಾ ಮಟ್ಟದಲ್ಲಿ ಅಂತಿಮಗೊಳಿಸಲು ಕೆಳಕಂಡಂತೆ ಸಮಿತಿ ರಚಿಸಲಾಗಿದೆ:–**

1. **ಸಹಕಾರ ಸಂಘಗಳ ಉಪ ನಿಬಂಧಕರು–ಸಮಿತಿ ಅಧ್ಯಕ್ಷರು.**
2. **ಜಂಟಿ ನಿರ್ದೇಶಕರು, ಕೃಷಿ ಇಲಾಖೆ/ಪ್ರತಿನಿಧಿಸುವ ಅಧಿಕಾರಿಗಳು–ಸದಸ್ಯರು.**
3. **ತಾಲ್ಲೂಕು ಕೇಂದ್ರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಕಾರ್ಯದರ್ಶಿಗಳು–ಸದಸ್ಯರು."**

**ಸದರಿ ಸಮಿತಿಯು ಆಯಾ ಜಿಲ್ಲೆಗಳಲ್ಲಿ ಅಗತ್ಯವಿರುವ ಈ ಯೋಜನೆಯಲ್ಲಿ ತಿಳಿಸಿರುವ ಯಂತ್ರೋಪಕರಣಗಳ ಖರೀದಿಯನ್ನು ನಿರ್ಧರಿಸತಕ್ಕದ್ದು.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 48**

**SC. 50**

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 184 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ:16.06.2015, 28.09.2015.
3. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/04/ಟಿಎಫ್‌ಪಿ/2015, ಬೆಂಗಳೂರು, ದಿನಾಂಕ:09.10.2015.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಬ್ಬಂದಿ/26/ ಇಜಿಪಿ/2015–16, ದಿನಾಂಕ:20.11.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾಗಿ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–004–0–01–059ರಡಿ ರೂ.5.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ 2015–16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಮೊದಲೆರಡು ಕಂತುಗಳಲ್ಲಿ ತಲಾ ರೂ.1.25 ಲಕ್ಷಗಳಂತೆ ಒಟ್ಟು ರೂ.2.50 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಿಂದಿನ ಕಂತುಗಳಲ್ಲಿ ಬಿಡುಗಡೆ ಮಾಡಿದ ಅನುದಾನದ ಶೇ.75 ರಷ್ಟು ಅನುದಾನ ಬಳಕೆಯಾಗಿದ್ದಲ್ಲಿ, 3ನೇ ಕಂತಿನಲ್ಲಿ ಶೇ.25 ರಷ್ಟು ಅನುದಾನ ಬಿಡುಗಡೆ ಮಾಡಲು ಇಲಾಖೆಯ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬಿಡುಗಡೆಯಾಗಿರುವ ಮೊದಲನೇ ಮತ್ತು ಎರಡನೇ ಕಂತಿನ ಅನುದಾನ ರೂ. 2.50 ಲಕ್ಷಗಳಲ್ಲಿ ರೂ. 2.45 ಲಕ್ಷಗಳನ್ನು ಪೂರ್ಣ ಪ್ರಮಾಣದಲ್ಲಿ ಉಪಯೋಗಿಸಿಕೊಂಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿ 3ನೇ ಕಂತಿನ ಅನುದಾನ ರೂ. 1.25 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಒ 184 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:19.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015-16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425-00-004-0-01-059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಮೂರನೇ ಕಂತಿನ ಅನುದಾನ ರೂ.1.25 ಲಕ್ಷ(ಒಂದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2015, ದಿನಾಂಕ:09.10.2015ರಲ್ಲಿ ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 155ಆಂಆಸ 2015, ದಿನಾಂಕ:18.12.2015 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 47**

**SC. 25**

## ಸಹಕಾರ ಸಚಿವಾಲಯ

**ವಿಷಯ:** 2015-16ನೇ ಸಾಲಿಗೆ ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 185 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:12.06.2015 ಮತ್ತು 30.10.2015.
3. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/04/ಟಿಎಫ್‌ಪಿ/2015, ಬೆಂಗಳೂರು, ದಿನಾಂಕ:09.10.2015.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಎಸ್‌ವಿಒ/09/2015-16, ದಿನಾಂಕ:20.11.2015.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ 2015-16ನೇ ಸಾಲಿನ ಮುಂದುವರೆದ ಯೋಜನೆಯಾದ ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425-00-001-0-01-125 ಆಧುನೀಕರಣ ರಡಿ ರೂ.15.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2) ರ ಸರ್ಕಾರಿ ಆದೇಶಗಳಲ್ಲಿ ಈ ಯೋಜನೆಯಡಿ ಮೊದಲನೇ ಮತ್ತು ಎರಡನೇ ತ್ರೈಮಾಸಿಕದಲ್ಲಿ ತಲಾ ರೂ.3.75 ಲಕ್ಷಗಳಂತೆ ಒಟ್ಟು ರೂ.7.50 ಲಕ್ಷ ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ಸರ್ಕಾರಿ ಆದೇಶದಲ್ಲಿ ಹಿಂದಿನ ಕಂತುಗಳಲ್ಲಿ ಬಿಡುಗಡೆ ಮಾಡಿದ ಅನುದಾನದ ಶೇ.75 ರಷ್ಟು ಅನುದಾನ ಬಳಕೆಯಾಗಿದ್ದಲ್ಲಿ, 3ನೇ ಕಂತಿನಲ್ಲಿ ಶೇ.25ರಷ್ಟು ಅನುದಾನ ಬಿಡುಗಡೆ ಮಾಡಲು ಇಲಾಖೆಯ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ ಓದಲಾದ (4) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬಿಡುಗಡೆಯಾಗಿರುವ ಮೊದಲನೇ ಮತ್ತು ಎರಡನೇ ಕಂತಿನ ಅನುದಾನ ರೂ.7.50 ಲಕ್ಷಗಳಲ್ಲಿ ರೂ.6.17 ಲಕ್ಷಗಳನ್ನು ಉಪಯೋಗಿಸಿಕೊಂಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿ 3ನೇ ಕಂತಿನ ಅನುದಾನ ರೂ.3.75 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:-

**ಸರ್ಕಾರದ ಆದೇಶ ಸಂಖ್ಯೆ:ಸಿಒ 185 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 19.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015-16ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕ ಶೀರ್ಷಿಕೆ 2425-00-001-0-01 ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಮೂರನೇ ತ್ರೈಮಾಸಿಕದಲ್ಲಿ ರೂ.3.75 ಲಕ್ಷ(ಮೂರು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2015, ದಿನಾಂಕ:09.10.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 154 ಆಂಆಸ 2015, ದಿನಾಂಕ:18.12.2015 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 46**
**SC. 25**

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಸ್ವಸಹಾಯ ಗುಂಪುಗಳ ಸಾಲದ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಓ 202 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:28.09.2015.
3. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/02/ಟಿಎಫ್‌ಪಿ/2015, ಬೆಂಗಳೂರು, ದಿನಾಂಕ:09.04.2015.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂ:ಸಿಆರ್‌ಡಿ/ಕೆಎಂಈ–8/ 1/2015–16, ದಿನಾಂಕ:22.12.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ರೂ.8600.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸದರಿ ಯೋಜನೆಯಡಿ ರೂ.8600.00 ಲಕ್ಷಗಳಲ್ಲಿ ಶೇ.25 ಭಾಗದ ರೂ.2150.00 ಲಕ್ಷಗಳ ಅನುದಾನವನ್ನು ಮೊದಲನೇ ಕಂತನ್ನಾಗಿ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಯವ್ಯಯ ಅವಕಾಶದ ಶೇ.25 ರ ಅನುದಾನವನ್ನು 2ನೇ ಕಂತಿನಲ್ಲಿ, ಮೊದಲನೇ ಕಂತಿನಲ್ಲಿ ಬಿಡುಗಡೆಗೊಳಿಸಿದ ಮೊತ್ತದ ಶೇ.75 ರಷ್ಟು ಬಳಕೆಯಾಗಿದ್ದಲ್ಲಿ ಬಿಡುಗಡೆಗೊಳಿಸಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಕಲ್ಪಿಸಿರುವ ರೂ.8600.00 ಲಕ್ಷಗಳಲ್ಲಿ ಶೇ.25 ಭಾಗದ ರೂ.2150.00 ಲಕ್ಷಗಳ ಅನುದಾನವನ್ನು ಎರಡನೇ ಕಂತನ್ನಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಮೊದಲನೇ ಕಂತಿನಲ್ಲಿ ಬಿಡುಗಡೆಗೊಳಿಸಿದ ರೂ.2150.00 ಲಕ್ಷಗಳ ಪೈಕಿ ರೂ.1875.57 ಲಕ್ಷ ಬಳಕೆಯಾಗಿರುವುದಾಗಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಓ 202 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 30.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16 ನೇ ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ರೂ.2150.00 ಲಕ್ಷ (ಎರಡು ಸಾವಿರದ ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಎರಡನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

**ಯೋಜನೆ:** ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ

**ಲೆಕ್ಕಶೀರ್ಷಿಕೆ:** 2425–00–107–2–41 (ರೂ.ಲಕ್ಷಗಳಲ್ಲಿ)

| | |
|---|---|
| 106–ಸಾಮಾನ್ಯ | 1962.75 |
| 422–ವಿಶೇಷ ಘಟಕ ಯೋಜನೆ | 98.75 |
| 423–ಗಿರಿಜನ ಉಪ ಯೋಜನೆ | 88.50 |
| **ಒಟ್ಟು** | **2150.00** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ:09.04.2015 ರಲ್ಲಿ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಮತ್ತು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 102 ಆಂಆಸ 2015, ದಿನಾಂಕ:23.09.2015 ರಲ್ಲಿನ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 55**
**SC. 25**

## ಸಹಕಾರ ಸಚಿವಾಲಯ

**ವಿಷಯ:** ವಿಫಲ ತೋಡುಬಾವಿ ಪರಿಹಾರ ಯೋಜನೆಯಲ್ಲಿ ಬಾಕಿ ಇರುವ ಪ್ರಕರಣಗಳಡಿ ಅಸಲು ಮತ್ತು ಬಡ್ಡಿ ಮೊತ್ತವನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್.ಸಿ.ಎಸ್/ಎಲ್.ಡಿ.ಬಿ–1/03/2013–14, ದಿನಾಂಕ:27.06.2014, 06.09.2014, 02.02.2015, 25.07.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರು ರಾಜ್ಯದ ಪಿಕಾರ್ಡ್ ಬ್ಯಾಂಕುಗಳಿಂದ ಸಾಲ ಪಡೆದು ನಿರ್ಮಿಸಿಕೊಂಡಿದ್ದ ತೋಡುಬಾವಿಗಳ ಪೈಕಿ ವಿಫಲಗೊಂಡ ತೋಡು ಬಾವಿಗಳಿಗೆ ಸರ್ಕಾರವು ವಿಫಲಬಾವಿ ಪರಿಹಾರ ಯೋಜನೆಯನ್ನು ಜಾರಿಗೆ ತಂದಿದ್ದು, ಈ ಯೋಜನೆಯ ನಿಬಂಧನೆಗಳನ್ನು ಸರ್ಕಾರವು ವಿವಿಧ ದಿನಾಂಕಗಳಲ್ಲಿ ಮಾರ್ಪಾಡುಗಳನ್ನು ಮಾಡಿ ವಿಫಲಬಾವಿ ಪರಿಹಾರ ಮೊತ್ತ ಬಿಡುಗಡೆಗೆ ಪ್ರಸ್ತಾವನೆಗಳನ್ನು ಸಲ್ಲಿಸಲು ದಿನಾಂಕ:31.12.2011ನ್ನು ಅಂತಿಮಗಡುವನ್ನಾಗಿ ನಿಗದಿಪಡಿಸಿ ನಂತರ ಈ ಯೋಜನೆಯನ್ನು ಸ್ಥಗಿತಗೊಳಿಸಲಾಗಿತ್ತು.

ದಿನಾಂಕ:31.12.2011ರ ಅಂತಿಮ ದಿನಾಂಕಕ್ಕೆ ವಿಫಲ ತೋಡುಬಾವಿ ಪರಿಹಾರಕ್ಕೆ ರೈತ ಸಾಲದಾರರುಗಳು ಪಿಕಾರ್ಡ್ ಬ್ಯಾಂಕುಗಳಿಗೆ ಸಲ್ಲಿಸಿರುವ ಕೆಲವು ಪ್ರಸ್ತಾವನೆಗಳನ್ನು ನಿಗಧಿತ ಅವಧಿ ಮೀರಿದ ಪ್ರಸ್ತಾವನೆಗಳೆಂದು ತ್ರಿಸದಸ್ಯ ಸಮಿತಿಗಳು ಸ್ಥಳ ಪರಿಶೀಲನೆ ನಡೆಸದೆ ತಿರಸ್ಕರಿಸಿರುವುದು, ಸ್ಥಳ ಪರಿಶೀಲನೆಗೆ ಬಾಕಿಯಿರುವ ಪ್ರಕರಣಗಳಲ್ಲಿ ನಿಗಧಿತ ಅವಧಿಯೊಳಗೆ ತ್ರಿಸದಸ್ಯ ಸಮಿತಿಗಳವತಿಯಿಂದ ಸ್ಥಳ ಪರಿಶೀಲನೆ ಆಗದಿರುವುದು, ಸ್ಥಳ ಪರಿಶೀಲನಾ ವರದಿಗಳು ಸಲ್ಲಿಕೆಯಾಗಿರುವ ಪೈಕಿ ಜಿಲ್ಲಾಧಿಕಾರಿಗಳಿಗೆ ನಿಗಧಿತ ಅವಧಿಯಲ್ಲಿ ಪರಿಹಾರದ ಮಂಜೂರಾತಿ ಆದೇಶ ನೀಡಲು ಸಾಧ್ಯವಾಗದಿರುವುದು, ಸರ್ಕಾರದ ಆದೇಶದಂತೆ ಹಿಂದೆ ಸಹಾಯಕ ಕಮಿಷನರ್‌ಗಳು ನೀಡಿದ ಪರಿಹಾರ ಮಂಜೂರಿ ಆದೇಶಗಳಲ್ಲಿ ಪರಿಹಾರದ ಮೊತ್ತ ಬಿಡುಗಡೆ ಆಗದಿರುವುದು ಇತ್ಯಾದಿ ಕಾರಣಗಳಿಂದ ವಿವಿಧ ಪ್ರಕರಣಗಳು ವಿಲೇವಾರಿಗೆ ಬಾಕಿಯಿದ್ದು, ದಿನಾಂಕ:31.03.2014ಕ್ಕೆ 1431 ಪ್ರಕರಣಗಳಲ್ಲಿ ರೂ.263.64 ಲಕ್ಷ ಬಾಕಿಯಿದ್ದು, ಈ ಮೊತ್ತವಲ್ಲದೇ ಬೇರೆ ಯಾವುದೇ ಪ್ರಕರಣಗಳು ಬಾಕಿಯಿಲ್ಲವೆಂದು, ಈ ಪ್ರಕರಣಗಳ ವಿಲೇವಾರಿಗೆ ಅವಕಾಶ ಕಲ್ಪಿಸುವಂತೆ ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು (ಕ್ಯಾಸ್ಕಾರ್ಡ್) ಸಹಕಾರ ಸಂಘಗಳ ನಿಬಂಧಕರ ಮೂಲಕ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 296 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ: 22.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ:31.03.2014ರ ಅಂತ್ಯಕ್ಕೆ ವಿವಿಧ ಹಂತಗಳಲ್ಲಿ ವಿಲೇವಾರಿಗೆ ಬಾಕಿಯಿದೆ ಎನ್ನಲಾಗಿರುವ 1431 ವಿಫಲ ತೋಡುಬಾವಿಗಳ ಪ್ರಕರಣಗಳಲ್ಲಿ ಬಾಕಿ ಇರುವ ಸಾಲದ ಅಸಲು ಮತ್ತು ಬಡ್ಡಿ ಒಟ್ಟು ರೂ.263.64 ಲಕ್ಷಗಳ ಮೊತ್ತವನ್ನು ಏಕಕಾಲಿಕ ಪರಿಹಾರ ಕ್ರಮವಾಗಿ ಮನ್ನಾ ಮಾಡಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ವಿಧಿಸಲಾಗಿರುವ ನಿಬಂಧನೆಗಳು/ಮಾನದಂಡಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಸಚಿವ ಸಂಪುಟ ವಿಷಯ ಸಂಖ್ಯೆ: ಸಿ:606:2015, ದಿನಾಂಕ:19.11.2015ರ ನಿರ್ಣಯದ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 364 ವೆಚ್ಚ–2/2015, ದಿನಾಂಕ:19.12.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

### ಅನುಬಂಧ

**ಸರ್ಕಾರಿ ಆದೇಶ ಸಂಖ್ಯೆ: ಸಿಒ 296 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ:22.12.2015**

**ವಿಸ್ತರಣೆಗೊಂಡ ವಿಫಲ ಬಾವಿ ಪರಿಹಾರ ಯೋಜನೆಯ ಅನುಷ್ಠಾನದ ಬಗ್ಗೆ ವಿಧಿಸಲಾಗಿರುವ ನಿಬಂಧನೆಗಳು/ಮಾನದಂಡಗಳು**

1. ಯೋಜನೆಯ ದಿನಾಂಕ:31.03.2014 ರಲ್ಲಿದ್ದಂತೆ

ಅ) ತ್ರಿಸದಸ್ಯ ಸಮಿತಿಗಳಿಗೆ ಸಲ್ಲಿಸಲು ಪಿಕಾರ್ಡ್ ಬ್ಯಾಂಕುಗಳಲ್ಲಿ ಬಾಕಿ ಇದ್ದ

ಆ) ತ್ರಿಸದಸ್ಯ ಸಮಿತಿಗಳಿಂದ ಕಾಲಮಿತಿಯ ಕಾರಣ ತಿರಸ್ಕರಿಸಲ್ಪಟ್ಟ

ಇ) ಹಿಂದೆ ಸಹಾಯಕ ಕಮಿಷನರ್‌ಗಳಿಂದ ಪರಹಾರದ ಮಂಜೂರಾತಿ ನೀಡಲ್ಪಟ್ಟು ಪರಿಹಾರದ ಮೊತ್ತ ಬಿಡುಗಡೆಯಾಗದಿರುವ

ಈ) ಜಿಲ್ಲಾಧಿಕಾರಿಗಳ ಹಂತದಲ್ಲಿ ಕಾಲಮಿತಿಯ ಕಾರಣ ತಿರಸ್ಕರಿಸಲ್ಪಟ್ಟ ಹಾಗೂ ಮಂಜೂರಾತಿಗೆ ಬಾಕಿ ಇದ್ದ ಹಾಗೂ

ಉ) ಸಹಕಾರ ಸಂಘಗಳ ನಿಬಂಧಕರಿಗೆ ಪರಿಹಾರದ ಬಿಡುಗಡೆಗೆ ಸಲ್ಲಿಸಲು ಬಾಕಿ ಇದ್ದ ಪಿಕಾರ್ಡ್ ಬ್ಯಾಂಕುಗಳ ವಿಫಲಬಾವಿ ಅರ್ಜಿ/ಪ್ರಸ್ತಾನೆಗಳಿಗೆ ಮಾತ್ರ ಈ ಆದೇಶವು ಅನ್ವಯವಾಗುತ್ತದೆ.

2. ಮೇಲಿನ ಎಲ್ಲಾ ಪ್ರಕರಣಗಳನ್ನು ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರು ಈ ಆದೇಶದ ದಿನಾಂಕದಿಂದ 15 ದಿನಗಳೊಳಗಾಗಿ ತ್ರಿಸದಸ್ಯ ಸಮಿತಿಗೆ ವರ್ಗಾಯಿಸತಕ್ಕದ್ದು,

ಈ ಉದ್ದೇಶಕ್ಕಾಗಿ ಈ ಯೋಜನೆಯಲ್ಲಿ ಅರ್ಜಿಗಳನ್ನು ಪರಿಶೀಲಿಸಿ, ವಿಫಲಬಾವಿ ಎಂದು ದೃಢೀಕರಿಸಲು ಆಯಾ ಉಪ ವಿಭಾಗದ ಸಹಾಯಕ ನಿಬಂಧಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಭೂ ವಿಜ್ಞಾನಿಗಳು (ಅಂತರ್ಜಲ) ಅಥವಾ ಕಸ್ಕಾರ್ಡ್ ಮತ್ತು ಆಯಾ ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರನ್ನೊಳಗೊಂಡ ತ್ರಿಸದಸ್ಯ ಸಮಿತಿಯನ್ನು ರಚಿಸಲಾಗಿದೆ.

3. ಈ ಮೇಲಿನ ಕಂಡಿಕೆ (1) ರ ಪ್ರಕರಣಗಳ ಪೈಕಿ (ಇ) ರಿಂದ (ಉ) ವರೆಗಿನ ಪ್ರಕರಣಗಳಲ್ಲಿ ಈ ಹಿಂದೆ ಈಗಾಗಲೇ ವಿಫಲ ಬಾವಿ ಎಂದು ದೃಢೀಕೃತಗೊಂಡಿದ್ದಲ್ಲಿ, ಅಂತಹ ಪ್ರಕರಣಗಳು ದೃಢೀಕೃತವಾಗಿರುವ ಬಗ್ಗೆ ದೃಢೀಕರಿಸಿಕೊಂಡು ಕ್ಲೇಮಿಗೆ ಬಿಲ್ಲುಗಳನ್ನು ಸಲ್ಲಿಸುವ ಸಲುವಾಗಿ ಮುಂದಿನ ಕ್ರಮಕ್ಕಾಗಿ ಆಯಾ ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರಿಗೆ ವರ್ಗಾಯಿಸತಕ್ಕದ್ದು.

4. ಮೇಲಿನ ಕಂಡಿಕೆ (1) ರ (ಅ) ಮತ್ತು (ಆ) ರಲ್ಲಿನ ಪ್ರಕರಣಗಳ ಪೈಕಿ ತ್ರಿಸದಸ್ಯ ಸಮಿತಿಗೆ ಸಲ್ಲಿಸಲು ಪಿಕಾರ್ಡ್ ಬ್ಯಾಂಕ್‌ಗಳಲ್ಲಿ ಬಾಕಿಯಿದ್ದ ಹಾಗೂ ತ್ರಿಸದಸ್ಯ ಸಮಿತಿಗಳಿಂದ ಕಾಲಮಿತಿಯ ಕಾರಣಕ್ಕಾಗಿ ತಿರಸ್ಕರಿಸಲ್ಪಟ್ಟ ಪ್ರಕರಣಗಳಿಗೆ ಸಂಬಂಧಿಸಿದಂತೆ ತ್ರಿಸದಸ್ಯ ಸಮಿತಿಯು ಮತ್ತೊಮ್ಮೆ ಆದೇಶದಲ್ಲಿ ತಿಳಿಸಿರುವ ಮಾನದಂಡಗಳನ್ವಯ ಪರಿಶೀಲಿಸಿ ದೃಢೀಕರಿಸಿದ ನಂತರ ಕ್ಲೇಮಿಗೆ ಪರಿಗಣಿಸುವ ಸಲುವಾಗಿ ಆಯಾ ಬ್ಯಾಂಕಿನ ವ್ಯವಸ್ಥಾಪಕರಿಗೆ ವರ್ಗಾಯಿಸತಕ್ಕದ್ದು.

5. ಮೇಲಿನ ಕಂಡಿಕೆ (1) ರಲ್ಲಿ ತಿಳಿಸಲಾಗಿರುವ ರೈತ ಸಾಲಗಾರರುಗಳಿಗೆ ಮಾತ್ರ ಈ ಯೋಜನೆ ಅನ್ವಯವಾಗತಕ್ಕದ್ದು.

6. ಈ ಪೈಕಿ ಈಗಾಗಲೇ ಸಾಲಗಾರರು ಈ ಆದೇಶದ ದಿನಾಂಕಕ್ಕೆ ಮರುಪಾವತಿಸಿರುವ ರೈತ ಸಾಲಗಾರರ ಸಾಲಗಳಿಗೆ ಈ ಯೋಜನೆ ಅನ್ವಯವಾಗುವುದಿಲ್ಲ.

7. ಈ ಯೋಜನೆಯಡಿ ಅಸಲು ಮತ್ತು ದಿನಾಂಕ:31.03.2014 ರವರೆಗಿನ ಬಡ್ಡಿಯನ್ನು ಮಾತ್ರ ಮನ್ನಾ ಮಾಡಲಾಗಿದೆ.

8. ಉಳಿದಂತೆ ಸುಸ್ತಿ ಬಡ್ಡಿ, ದಂಡದ ಬಡ್ಡಿ, ವಸೂಲಾತಿ ವೆಚ್ಚ ಮತ್ತು ನ್ಯಾಯಾಲಯದ ವೆಚ್ಚ ಇತ್ಯಾದಿಗಳು ಈ ಯೋಜನೆ ವ್ಯಾಪ್ತಿಗೆ ಬರುವುದಿಲ್ಲ.

9. ಈ ಆದೇಶದನ್ವಯ ದಿನಾಂಕ:31.03.2014ರವರೆಗೆ ಮಾತ್ರ ಬಡ್ಡಿಯನ್ನು ಕ್ಲೈಂ ಮಾಡತಕ್ಕದ್ದು. ನಂತರ ಯಾವುದೇ ಬಡ್ಡಿಯನ್ನು ರೈತರಿಂದ ಪಡೆಯತಕ್ಕದ್ದಲ್ಲ ಮತ್ತು ಕ್ಲೈಂ ಮಾಡಿದ ನಂತರ ರೈತರ ಖಾತೆಯನ್ನು ಚುಕ್ತಗೊಳಿಸತಕ್ಕದ್ದು.

10. ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಏಕಕಾಲಿಕ ಪರಿಹಾರ ಕ್ರಮವಾಗಿರುವ ಈ ಯೋಜನೆಯ ಅನುಷ್ಠಾನಕ್ಕಾಗಿ ಅಗತ್ಯವಿರುವ ಎಲ್ಲಾ ಕ್ರಮಗಳನ್ನು ಕೈಗೊಂಡು ಈ ಸಂಬಂಧ ಅಗತ್ಯವಿರುವ ಸೂಚನೆ/ನಮೂನೆಗಳು/ಕ್ಲೈಂ ಬಿಲ್ಲು ತಯಾರಿಸುವ ಕ್ರಮ ಇತ್ಯಾದಿಗಳ ಬಗ್ಗೆ ನಿಗಾವಹಿಸಿ ಕಾಲಕಾಲಕ್ಕೆ ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರಿಗೆ ಸೂಚನೆ ನೀಡಿ ಯೋಜನೆ ಅನುಷ್ಠಾನಕ್ಕೆ ಅಗತ್ಯವಿರುವ ಎಲ್ಲಾ ಕ್ರಮಗಳನ್ನು ಅನುಸರಿಸತಕ್ಕದ್ದು.

11. ಪಿಕಾರ್ಡ್ ಬ್ಯಾಂಕುಗಳು ವಸೂಲಾತಿ ಆದೇಶಗಳೊಂದಿಗೆ ಲೆಕ್ಕಾಧಿಕಾರಿ ಮತ್ತು ವ್ಯವಸ್ಥಾಪಕರು ಪರಿಶೀಲಿಸಿ ದೃಢೀಕರಿಸಿದ ಕ್ಲೈಂ ಬಿಲ್ಲುಗಳನ್ನು ಕಸ್ಕಾರ್ಡ್ ಬ್ಯಾಂಕಿನ ಜಿಲ್ಲಾ ವ್ಯವಸ್ಥಾಪಕರಿಗೆ ಸಲ್ಲಿಸಬೇಕು.

12. ಜಿಲ್ಲಾ ವ್ಯವಸ್ಥಾಪಕರು ಜಿಲ್ಲೆಯ ಕ್ರೋಢೀಕೃತ ಬಿಲ್ಲುಗಳನ್ನು ದೃಢೀಕರಿಸಿ ಮಂಜೂರಾತಿ ಆದೇಶ ಮತ್ತು ಪಿಕಾರ್ಡ್ ಬ್ಯಾಂಕುಗಳ ಕ್ಲೈಂ ಬಿಲ್ಲುಗಳೊಂದಿಗೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರಿಗೆ ಸಲ್ಲಿಸಬೇಕು.

13. ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಪರಿಹಾರ ಮಂಜೂರಾತಿ ಆದೇಶಗಳನ್ನು, ಪ್ರಕರಣವಾರು ಕ್ರೋಢೀಕೃತ ಕ್ಲೈಂ ಬಿಲ್ಲುಗಳನ್ನು ಪರಿಶೀಲಿಸಿ, ಕ್ಲೈಂ ಮೊತ್ತದ ಬಿಡುಗಡೆಗೆ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

14. ಕ್ಲೈಂ ಬಿಲ್ಲುಗಳನ್ನು ಸಹಕಾರ ಸಂಘಗಳ ನಿಬಂಧಕರಿಗೆ ದಿನಾಂಕ:31.03.2016 ರೊಳಗೆ ಸಲ್ಲಿಸತಕ್ಕದ್ದು.

15. ಸಹಕಾರ ಸಂಘಗಳ ನಿಬಂಧಕರು ಪರಿಹಾರದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನಲ್ಲಿರುವ ಕಸ್ಕಾರ್ಡ್ ಬ್ಯಾಂಕಿನ ಖಾತೆಗೆ ಜಮಾ ನೀಡಿಸುವ ಮೂಲಕ ಬಿಡುಗಡೆ ಮಾಡುವುದು.

16. ಸದರಿ ಪರಿಹಾರವನ್ನು ಏಕಕಾಲಿಕ ಪರಿಹಾರವಾಗಿ ನೀಡುತ್ತಿರುವುದರಿಂದ, ಸರ್ಕಾರಕ್ಕೆ ಮತ್ತೆ ಹೊರೆಯಾಗದಂತೆ ಕ್ರಮವಹಿಸತಕ್ಕದ್ದು.

17. ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ರೈತ ಸಾಲಗಾರರ ಖಾತೆಗಳಿಗೆ ಮನ್ನಾ ಸೌಲಭ್ಯ ನೀಡಿದ ನಂತರ ಫಲಾನುಭವಿಗಳ ಸಂಪೂರ್ಣ ಮಾಹಿತಿಯೊಂದಿಗೆ ಬಳಕೆ ಪ್ರಮಾಣ ಪತ್ರವನ್ನು ನಿಬಂಧಕರ ಮೂಲಕ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

18. ಈ ಯೋಜನೆಯಲ್ಲಿ ಕ್ಲೈಂ ಬಿಲ್ಲುಗಳಲ್ಲಿ ಯಾವುದೇ ಮೋಸ/ದೋಷ/ಅನರ್ಹ ಕ್ಲೈಂ ಇತ್ಯಾದಿಗಳು ಕಂಡು ಬಂದಲ್ಲಿ ಇದಕ್ಕೆ ಸಂಬಂಧಪಟ್ಟ ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರು ಮತ್ತು ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಜವಾಬ್ದಾರರಾಗಿರುತ್ತಾರೆ.

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 44**
**SC. 50**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆ (ಕೆ-ಜಿಐಎಸ್) ಯೋಜನೆಯ ಉನ್ನತಮಟ್ಟದ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 14 ಎಡಿಎಂ 2015, ದಿನಾಂಕ:02.06.2015.

**ಪ್ರಸ್ತಾವನೆಃ**

ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆ ಯೋಜನೆಯನ್ನು ಕರ್ನಾಟಕ ದೂರ ಸಂವೇದಿ ಅನ್ವಯಿಕ ಕೇಂದ್ರದಿಂದ ಅನುಷ್ಠಾನಗೊಳಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ. ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರವು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ (ಕೆಎಸ್ಎನ್ಎಂಡಿಸಿ) ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಪರಿಷತ್ತು (ಕೆಎಸ್‌ಸಿಎಸ್‌ಟಿ) ಇವರ ಸಹಯೋಗದೊಂದಿಗೆ ಮೂರು ವರ್ಷಗಳಲ್ಲಿ ಅನುಷ್ಠಾನಗೊಳಿಸಲಾಗುವುದು. ಕೆ-ಜಿಐಎಸ್ ಯೋಜನೆಯು ರಾಜ್ಯದಲ್ಲಿ ಪ್ರಮಾಣೀಕೃತ, ರಾಜ್ಯವ್ಯಾಪಿ ಸೀಮಾರಹಿತ, ನಿರಂತವಾಗಿ ಉನ್ನತೀಕರಿಸಿದ ಜಿಐಎಸ್ ಆಧಾರಿತ ನಕ್ಷೆಗಳು, ದತ್ತಾಂಶ, ಉಪಗ್ರಹ ಚಿತ್ರಗಳು, ಕ್ಷೇತ್ರ ಮಾಹಿತಿ ಹಾಗೂ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ದಾಖಲೆ/ ಮಾಹಿತಿಗಳನ್ನು ಒಗ್ಗೂಡಿಸಿ ರಾಜ್ಯದ ಸಮಗ್ರ ಮಾಹಿತಿಯನ್ನು ಒದಗಿಸುವ ವ್ಯವಸ್ಥೆಯಾಗಿರುತ್ತದೆ. ಇದಲ್ಲದೇ, ವಿವಿಧ ಇಲಾಖೆಗಳಿಗೆ ಅವಶ್ಯವಿರುವ ನಿರ್ಧಾರ ಕೈಗೊಳ್ಳಲು ಬೆಂಬಲಿಸುವ ಜಿಐಎಸ್ ಆಧಾರಿತ ತಂತ್ರಾಂಶಗಳನ್ನೂ ಸಹ ಅಭಿವೃದ್ಧಿಪಡಿಸುವುದು. ಕೆ-ಜಿಐಎಸ್‌ನ ಜಿಐಎಸ್ ಆಧಾರಿತ ತಂತ್ರಾಂಶಗಳು ಮತ್ತು ಸಮಗ್ರ ದತ್ತಾಂಶ ಹಂಚಿಕೆ ಹಾಗೂ ವಿವಿಧ ಭೌಗೋಳಿಕ ಮಾಹಿತಿ ಅನ್ವಯಿಕ ಸೇವೆಗಳನ್ನು ಒದಗಿಸಲು ವೈಶಿಷ್ಠದಿಂದ ಕೂಡಿದ, ಉಪಯೋಗಿಸಲು ಸುಲಭವಾದ, ಏಕಗವಾಕ್ಷಿ ಆಧಾರಿತ ಕರ್ನಾಟಕ ಭೌಗೋಳಿಕ ಮಾಹಿತಿ ಪೋರ್ಟಲ್ ಅನ್ನು ಅಭಿವೃದ್ಧಿಪಡಿಸಿ ಕೆ-ಜಿಐಎಸ್‌ಗಾಗಿ ಮೀಸಲಾದ ಉನ್ನತ ಕಾರ್ಯಕ್ಷಮತೆಯ ಮೂಲಸೌಕರ್ಯವನ್ನು ಒದಗಿಸಲಾಗುವುದು. ವಿವಿಧ ಇಲಾಖೆಗಳ ಅಧಿಕಾರಿಗಳಿಗೆ ಕೆ-ಜಿಐಎಸ್ ತಂತ್ರಾಂಶಗಳನ್ನು ಉಪಯೋಗಿಸುವ ಕುರಿತು ಉನ್ನತ ಮಟ್ಟದ ತರಬೇತಿಯನ್ನು ಆಯೋಜಿಸಲಾಗುವುದು.

ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆಯ ಮಿಷನ್‌ನೊಂದಿಗೆ ಇಲಾಖೆಗಳು ನಿರಂತರ ಸಂಪರ್ಕದಲ್ಲಿದ್ದು, ಅವಶ್ಯವಿರುವ ಜಿಐಎಸ್ ಆಧಾರಿತ ತಂತ್ರಾಂಶಗಳನ್ನು ರಚಿಸುವಲ್ಲಿ, ಸಲಹೆಗಳನ್ನು ನೀಡಿ ಉನ್ನತ ಮಟ್ಟದ ನಿರ್ಧಾರ ಆಧಾರಿತ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಲು ಹಾಗೂ ಅವುಗಳನ್ನು ಸಮರ್ಪಕವಾಗಿ ಉಪಯೋಗಪಡಿಸಿಕೊಳ್ಳಲಾಗುವುದು.

ಈ ನಿಟ್ಟಿನಲ್ಲಿ ಕೆ-ಜಿಐಎಸ್ ಮಿಷನ್ ಹಾಗೂ ಇಲಾಖೆಗಳ ನಡುವೆ ಸಮನ್ವಯ ಏರ್ಪಡಿಸಿ ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆಯು ಸಮರ್ಪಕವಾಗಿ ಹಾಗೂ ತ್ವರಿತವಾಗಿ ಅನುಷ್ಠಾನಗೊಳ್ಳಲು ನೆರವಾಗಲು, ಕರ್ನಾಟಕ ಸರ್ಕಾರದ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕೆಳಕಂಡ ವಿವಿಧ ಇಲಾಖೆಗಳ ಹಿರಿಯ ಅಧಿಕಾರಿಗಳನ್ನೊಳಗೊಂಡ ಅಧಿಕಾರಯುಕ್ತ ಉನ್ನತಮಟ್ಟದ ಸಮಿತಿಯನ್ನು ರಚಿಸಲು ನಿರ್ಧರಿಸಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಐಟಿಡಿ 304 ಎಡಿಎಂ 2015(1), ದಿನಾಂಕ:15.09.2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆಯನ್ನು ಕರ್ನಾಟಕ ದೂರಸಂವೇದಿ ಅನ್ವಯಿಕ ಕೇಂದ್ರದಿಂದ ಅನುಷ್ಠಾನದ ಬಗ್ಗೆ ಮಾರ್ಗದರ್ಶನ ಹಾಗೂ ಚಟುವಟಿಕೆಗಳ ಬಗ್ಗೆ ಸಲಹೆ ನೀಡಲು ಸರ್ಕಾರದ ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಉನ್ನತಮಟ್ಟದ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಮುಖ್ಯಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| 2 | ಅಪರ ಮುಖ್ಯಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ | ಸದಸ್ಯರು |
| 3 | ಅಪರ ಮುಖ್ಯಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ | ಸದಸ್ಯರು |
| 4 | ಪ್ರಧಾನ ಕಾರ್ಯದರ್ಶಿಗಳು, ಮಾತಂ, ಜೈತಂ ಮತ್ತು ವಿತಂ ಇಲಾಖೆ ಮತ್ತು ಅಧ್ಯಕ್ಷರು, ಕ.ರಾ.ದೂ.ಸಂ.ಅ.ಕೇಂದ್ರ | ಸದಸ್ಯರು |
| 5 | ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 6 | ಪ್ರಧಾನ ಕಾರ್ಯದರ್ಶಿಗಳು,ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 7 | ಪ್ರಧಾನ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ, ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | ಸದಸ್ಯರು |
| 8 | ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 9 | ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 10 | ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ-ಆಡಳಿತ) | ಸದಸ್ಯರು |
| 11 | ಡಾ. ಮುಕುಂದ ಕಡೂರುಶ್ರೀನಿವಾಸ ರಾವ್, ಅಧ್ಯಕ್ಷರು, ಕೆ-ಜಿಐಎಸ್ ತಾಂತ್ರಿಕ ಸಮಿತಿ | ಸದಸ್ಯರು |
| 12 | ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಮತ್ತು ಮಿಷನ್ ಡೈರೆಕ್ಟರ್, ಕೆ-ಜಿಐಎಸ್ | ಸದಸ್ಯ ಕಾರ್ಯದರ್ಶಿ |

* ಮೇಲಿನ ಸಮಿತಿಗೆ ಇಬ್ಬರು ತಜ್ಞರುಗಳನ್ನು Co-opt ಮಾಡಿಕೊಳ್ಳಲು ಅವಕಾಶವಿದೆ.

ಉನ್ನತಾಧಿಕಾರಯುಕ್ತ ಸಮಿತಿಯು ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆ ಅನುಷ್ಠಾನಗೊಳಿಸುವಲ್ಲಿ ಅನುಸರಿಸಬೇಕಾದ ಸಾಮಾನ್ಯ ನೀತಿ, ಮಾರ್ಗದರ್ಶನ ಅಲ್ಲದೇ ಕೆ–ಜಿಐಎಸ್ ಅನುಷ್ಠಾನಗೊಳಿಸುವ ಪ್ರಾಧಿಕಾರ ಹಾಗೂ ಇಲಾಖೆಗಳ ಮಧ್ಯೆ ಸಮನ್ವಯದೊಂದಿಗೆ ಯೋಜನೆಯ ಕಾರ್ಯಗಳು ಯಾವುದೇ ಅಡೆತಡೆ ಇಲ್ಲದೆ ತ್ವರಿತವಾಗಿ ನಡೆಯುವಂತೆ ಮೇಲ್ವಿಚಾರಣೆ ಮಾಡುವುದು.

ಯೋಜನೆಯ ಅನುಷ್ಠಾನಕ್ಕೆ ಅವಶ್ಯಕತೆ ಇರುವ ಮೂಲಸೌಕರ್ಯಗಳು, ಹಾರ್ಡ್‌ವೇರ್, ತಂತ್ರಾಂಶ, ತಾಂತ್ರಿಕ ಮಾನವ ಸಂಪನ್ಮೂಲವನ್ನು ಒದಗಿಸುವ ಹೊಣೆಗಾರಿಕೆಯು ಕ.ರಾ.ದೂ.ಸಂ.ಅ.ಕೇಂದ್ರದ್ದಾಗಿರುತ್ತದೆ. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಮತ್ತು ಕ.ರಾ.ದೂ.ಸಂ.ಅ.ಕೇಂದ್ರವು (ನೋಡಲ್ ಏಜೆನ್ಸಿ) ತ್ವರಿತವಾಗಿ ಯೋಜನೆಯನ್ನು ಕಾರ್ಯಾರಂಭಗೊಳ್ಳುವಂತೆ ಹಾಗೂ 3 ವರ್ಷಗಳ ಅವಧಿಯಲ್ಲಿ ಯಶಸ್ವಿಯಾಗಿ ಪೂರ್ಣಗೊಳ್ಳುವಂತೆ ಕ್ರಮಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ರಾಮಪ್ಪ ಹ ತಳವಾರ**

ಸರ್ಕಾರದ ಅಧೀನ ಕಾರ್ಯದರ್ಶಿ,

PR. 41 ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆ (ಕೆ–ಜಿಐಎಸ್) ಯೋಜನೆಯ ತಾಂತ್ರಿಕ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 14 ಎಡಿಎಂ 2015, ದಿನಾಂಕ:02.06.2015.

**ಪ್ರಸ್ತಾವನೆ:**

ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆ ಯೋಜನೆಯನ್ನು ಕರ್ನಾಟಕ ದೂರ ಸಂವೇದಿ ಅನ್ವಯಿಕ ಕೇಂದ್ರದಿಂದ ಅನುಷ್ಠಾನಗೊಳಿಸಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಯೋಜನೆಗೆ ಸಂಬಂಧಿಸಿದಂತೆ, ಕಾರ್ಯನಿರ್ಧಾರಗಳನ್ನು ವ್ಯಾಖ್ಯಾನಿಸಲು, ಮಾರ್ಗದರ್ಶನ ನೀಡಲು, ಚಟುವಟಿಕೆಗಳ ಸಮಗ್ರ ಯೋಜನೆಯನ್ನು ರೂಪಿಸಲು ಅನುಕೂಲವಾಗುವಂತೆ ಒಬ್ಬ ಜಿಐಎಸ್ ತಜ್ಞರ ಅಧ್ಯಕ್ಷತೆಯಲ್ಲಿ, ವಿವಿಧ ಇಲಾಖೆಗಳ ಅಧಿಕಾರಿಗಳು ಹಾಗೂ ಕೇಂದ್ರ ಸರ್ಕಾರದ ಇಲಾಖೆಗಳ ಪ್ರತಿನಿಧಿಗಳನ್ನೊಳಗೊಂಡ ಜಿಐಎಸ್ ತಾಂತ್ರಿಕ ಸಮಿತಿಯನ್ನು ರಚಿಸಲು ನಿರ್ಧರಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 304 ಎಡಿಎಂ 2015 (2), ದಿನಾಂಕ:15.09.2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಭೌಗೋಳಿಕ ಮಾಹಿತಿ ವ್ಯವಸ್ಥೆ ಯೋಜನೆ ಅನುಷ್ಠಾನಗೊಳಿಸುವಲ್ಲಿ ಡಾ॥ ಮುಕುಂದ ಕಡೂರು ಶ್ರೀನಿವಾಸ ರಾವ್ ರವರ ಅಧ್ಯಕ್ಷತೆಯಲ್ಲಿ ಕೆ–ಜಿಐಎಸ್ ತಾಂತ್ರಿಕ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲಾಗಿದೆ.

| | | |
|---|---|---|
| 1 | ಡಾ. ಮುಕುಂದ ಕಡೂರುಶ್ರೀನಿವಾಸ ರಾವ್ | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿ, ಇ–ಆಡಳಿತ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು |
| 3 | ಟಿ.ಪಿ.ಸಿಂಗ್, ಮಹಾ ನಿರ್ದೇಶಕರು, ಬಿ.ಐ.ಎಸ್.ಎ.ಜಿ, ಗುಜರಾತ್ | ಸದಸ್ಯರು |
| 4 | ಡಾ. ಭೂಪ್‌ಸಿಂಗ್, ಎನ್.ಆರ್.ಡಿ.ಎಂ.ಎಸ್. ವಿಜ್ಞಾನ ತಂತ್ರಜ್ಞಾನ ಇಲಾಖೆ, ಭಾರತ ಸರ್ಕಾರ | ಸದಸ್ಯರು |
| 5 | ಕಾರ್ಯನಿರ್ವಾಹಕ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಪರಿಷತ್ತು | ಸದಸ್ಯರು |
| 6 | ಎ. ವೆಂಕಟೇಶನ್, ಎಸ್.ಐ.ಓ, ಎನ್.ಐ.ಸಿ, ಬೆಂಗಳೂರು | ಸದಸ್ಯರು |
| 7 | ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಮತ್ತು ಮಿಷನ್ ಡೈರೆಕ್ಟರ್, ಕೆ–ಜಿಐಎಸ್ | ಸದಸ್ಯ ಕಾರ್ಯದರ್ಶಿ |

ಮೇಲ್ಕಾಣಿಸಿದ ಕೆ–ಜಿಐಎಸ್ ತಾಂತ್ರಿಕ ಸಮಿತಿಯು ಯೋಜನೆಯ ಕಾರ್ಯವಿಧಾನಗಳನ್ನು ವ್ಯಾಖ್ಯಾನಿಸಲು, ಚಟುವಟಿಕೆಗಳ ಸಮಗ್ರ ಯೋಜನೆಯನ್ನು ರೂಪಿಸಲು ಹಾಗೂ ತಾಂತ್ರಿಕ ಅಂಶಗಳ ಬಗ್ಗೆ ಸೂಕ್ತ ಸಲಹೆ ಹಾಗೂ ಶಿಫಾರಸ್ಸುಗಳನ್ನು ಕ.ರಾ.ದೂ.ಸಂ.ಅ.ಕೇಂದ್ರಕ್ಕೆ ಸಲ್ಲಿಸತಕ್ಕದ್ದು.

ಸದರಿ ತಾಂತ್ರಿಕ ಸಮಿತಿಯು ಸರ್ಕಾರದ ವಿವಿಧ ಇಲಾಖೆಗಳೊಂದಿಗೆ ಚರ್ಚಿಸಿ ಅವರುಗಳ ಅಗತ್ಯತೆಗಳನ್ನು ಪರಿಶೀಲಿಸಿ ಸೂಕ್ತ ಶಿಫಾರಸ್ಸುಗಳನ್ನು ಮಾಡತಕ್ಕದ್ದು. ಕೆ–ಜಿಐಎಸ್ ಗೆ ಸಂಬಂಧಿಸಿದಂತೆ ಹಣಕಾಸಿನ ಅನುಮೋದನೆಗಳನ್ನೊಳಗೊಂಡು ಇನ್ನುಳಿದ ಎಲ್ಲಾ ಅಂಶಗಳಿಗೆ ಮಾರ್ಗದರ್ಶನ ನೀಡುವುದು

ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಕಾರ್ಯಕಾರಿ ಸಮಿತಿಯ ವ್ಯಾಪ್ತಿಯದ್ದಾಗಿರುತ್ತದೆ. ತಾಂತ್ರಿಕ ಸಮಿತಿಯು ಯೋಜನೆಗೆ ಸಂಬಂಧಿಸಿದಂತೆ ರೂಪುರೇಷೆಗಳನ್ನು ರೂಪಿಸಲು / ತಯಾರಿಸಲು ಉಪಸಮಿತಿಗಳನ್ನು ರಚಿಸಲು ಅಧಿಕಾರವುಳ್ಳದಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ರಾಮಪ್ಪ ಹ ತಳವಾರ**

ಸರ್ಕಾರದ ಅಧೀನ ಕಾರ್ಯದರ್ಶಿ,

PR. 42 ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ವಿಫಲ ತೋಡುಬಾವಿ ಪರಿಹಾರ ಯೋಜನೆಯಲ್ಲಿ ಬಾಕಿ ಇರುವ ಪ್ರಕರಣಗಳನ್ನು ಪರಿಶೀಲಿಸಲು ತ್ರಿಸದಸ್ಯ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್.ಸಿ.ಎಸ್./ ಎಲ್.ಡಿ.ಬಿ.–1/03/2013–14, ದಿನಾಂಕ:27.06.2014, 06.09.2014, 02.02.2015, 25.07.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರು ರಾಜ್ಯದ ಪಿಕಾರ್ಡ್ ಬ್ಯಾಂಕುಗಳಿಂದ ಸಾಲ ಪಡೆದು ನಿರ್ಮಿಸಿಕೊಂಡಿದ್ದ ತೋಡುಬಾವಿಗಳ ಪೈಕಿ ವಿಫಲಗೊಂಡ ತೋಡು ಬಾವಿಗಳಿಗೆ ಸರ್ಕಾರವು ವಿಫಲಬಾವಿ ಪರಿಹಾರ ಯೋಜನೆಯನ್ನು ಜಾರಿಗೆ ನೀಡಿದ್ದು, ಈ ಯೋಜನೆಯ ನಿಬಂಧನೆಗಳನ್ನು ಸರ್ಕಾರವು ವಿವಿಧ ದಿನಾಂಕಗಳಲ್ಲಿ ಮಾರ್ಪಾಡುಗಳನ್ನು ಮಾಡಿ ವಿಫಲಬಾವಿ ಪರಿಹಾರ ಬಿಡುಗಡೆಗೆ ಪ್ರಸ್ತಾವೆಗಳನ್ನು ಸಲ್ಲಿಸಲು ದಿನಾಂಕ:31.12.2011 ಅನ್ನು ಅಂತಿಮ ಗಡುವನ್ನಾಗಿ ನಿಗಧಿಪಡಿಸಿ ನಂತರ ಈ ಯೋಜನೆಯನ್ನು ಸ್ಥಗಿತಗೊಳಿಸಲಾಗಿತ್ತು.

ದಿನಾಂಕ:17.10.2013 ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ತೀರ್ಮಾನದಂತೆ ವಿಫಲ ಭಾವಿ ಪರಿಹಾರಕ್ಕಾಗಿ ಜಿಲ್ಲಾವಾರು ಬೇಡಿಕೆಗಳನ್ನು ಪರಿಶೀಲಿಸಲು ಸಚಿವ ಸಂಪುಟ ಸಭೆಯ ಅನುಮೋದನೆ ಪಡೆದು ವಿಫಲ ಭಾವಿ ಪರಿಹಾರ ಯೋಜನೆಯಡಿ 1431 ಪ್ರಕರಣಗಳಲ್ಲಿ ಬಾಕಿ ಇರುವ ಸಾಲದ ಅಸಲು ಮತ್ತು ಬಡ್ಡಿ ಮೊತ್ತವನ್ನು ಮನ್ನಾ ಮಾಡಲು ನಿರ್ಧರಿಸಲಾಗಿರುತ್ತದೆ.

ಸಹಕಾರ ಸಂಘಗಳ ನಿಬಂಧಕರು ಪರಿಹಾರ ನೀಡಬೇಕಾಗುವ ಪ್ರಕರಣಗಳನ್ನು ಗುರುತಿಸಿದ್ದು, ಈ ಪ್ರಕರಣಗಳನ್ನು ಪರಿಶೀಲಿಸಿ ದೃಡೀಕರಿಸಲು ಸಂಬಂಧಪಟ್ಟ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಭೂವಿಜ್ಞಾನಿಗಳು(ಅಂತರ್‌ಜಲ) ಮತ್ತು ಆಯಾ ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರನ್ನೊಳಗೊಂಡ ತಾಲ್ಲೂಕು ಮಟ್ಟದ ತ್ರಿಸದಸ್ಯ ಸಮಿತಿಯನ್ನು ರಚಿಸಲು ತೀರ್ಮಾನಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 296 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ: 22.12.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ:31.03.2014ರ ಅಂತ್ಯಕ್ಕೆ ವಿವಿಧ ಹಂತಗಳಲ್ಲಿ ವಿವಿಧ ಕಾರಣಗಳಿಗಾಗಿ ವಿಲೇವಾರಿಗೆ ಬಾಕಿಯಿದೆ ಎನ್ನಲಾಗಿರುವ 1431 ವಿಫಲ ತೋಡುಬಾವಿಗಳ ಪ್ರಕರಣಗಳಲ್ಲಿ ಬಾಕಿ ಇರುವ ಸಾಲದ ಅಸಲು ಮತ್ತು ಬಡ್ಡಿ ಒಟ್ಟು ₹. 263.64 ಲಕ್ಷಗಳ ಮೊತ್ತವನ್ನು ಏಕಕಾಲಿಕ ಪರಿಹಾರ ಕ್ರಮವಾಗಿ ಮನ್ನಾ ಮಾಡಲು ತೀರ್ಮಾನಿಸಲಾಗಿರುತ್ತದೆ. ವಿಫಲ ಭಾವಿ ಪರಿಹಾರಕ್ಕಾಗಿ ಸಲ್ಲಿಕೆಯಾಗಿರುವ ರೈತ ಸಾಲಗಾರರ ಪ್ರಕರಣಗಳನ್ನು ಪರಿಶೀಲಿಸಿ ದೃಡೀಕರಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ತಾಲ್ಲೂಕು ಮಟ್ಟದ ತ್ರಿಸದಸ್ಯ ಸಮಿತಿಗಳನ್ನು ರಚಿಸಲಾಗಿದೆ.

1. ಸಂಬಂಧಿಸಿದ ಉಪವಿಭಾಗದ ಜಿಲ್ಲಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು–ಅಧ್ಯಕ್ಷರು
2. ಭೂಗರ್ಭ ಶಾಸ್ತ್ರಜ್ಞರು (Geologist), ಗಣಿ ಮತ್ತು ಭೂಗರ್ಭ ಇಲಾಖೆಯು ನಿಯೋಜಿಸುವ ಅಂತರ್ಜಲ ಪರಿಣಿತ ಅಧಿಕಾರಿ ಅಥವಾ ಕಸ್ಕಾರ್ಡ್ ಬ್ಯಾಂಕಿನ ಸಹಾಯಕ ಭೂಭೌತ ವಿಜ್ಞಾನಿ (Assistant Geophysicist)– ಸದಸ್ಯರು
3. ಸಂಬಂಧಿಸಿದ ಪಿಸಿಎಆರ್‌ಡಿ ಬ್ಯಾಂಕಿನ ವ್ಯವಸ್ಥಾಪಕರು– ಸದಸ್ಯ ಕಾರ್ಯದರ್ಶಿ

ಮೇಲ್ಕಂಡ ಸಮಿತಿಯು ರೈತ ಸಾಲಗಾರರ ಪ್ರಕರಣಗಳನ್ನು ಆದ್ಯತೆ ಮೇರೆಗೆ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಿ ದೃಡೀಕರಿಸಿಕೊಡತಕ್ಕದ್ದು.

1. ಪಿಕಾರ್ಡ್ ಬ್ಯಾಂಕುಗಳು ದಿನಾಂಕ:31.03.2014 ರಲ್ಲಿ ಇದ್ದಂತೆ ಸ್ಥಳ ಪರಿಶೀಲನೆಗೆ ಬಾಕಿ ಇದ್ದ ಪರಿಹಾರ ಅರ್ಜಿಗಳನ್ನು ಸ್ಥಳ ಪರಿಶೀಲನೆಗಾಗಿ ದಿನಾಂಕ:14.01.2016 ರೊಳಗೆ ವಿಳಂಭವಿಲ್ಲದಂತೆ ತ್ರಿಸದಸ್ಯ ಸಮಿತಿಗೆ ಸಲ್ಲಿಸುವುದು.
2. ಬಾವಿ ತೋಡುವಾಗಿನ ಪರಿಸ್ಥಿತಿಯನ್ನು ಆಧರಿಸಿ ಬಾವಿ ವಿಫಲತೆಯನ್ನು ಪರಿಗಣಿಸಬೇಕು. ಕನಿಷ್ಠ 20 ಅಡಿ ಆಳದಷ್ಟು ಬಾವಿ ತೋಡಿದಾಗಲೂ ನೀರು ಬರದಿದ್ದಲ್ಲಿ ಅದನ್ನು ವಿಫಲಬಾವಿ ಎಂದು ಪರಿಗಣಿಸಬಹುದು. ಬಾವಿ ತೋಡಿದಾಗ ನಿಗದಿತ ಪ್ರಮಾಣದ ನೀರು ಲಭ್ಯವಾಗಿ ಬಾವಿ ಪೂರ್ಣಗೊಂಡ ದಿನಾಂಕದಿಂದ ಒಂದು ವರ್ಷದವರೆಗೆ ಇದ್ದು ಅನಂತರ ನೀರು ಬತ್ತಿ ಹೋಗಿದೆ ಎಂಬ ಕಾರಣದ ಮೇಲೆ ಅಂತಹ ಬಾವಿಯನ್ನು ವಿಫಲಬಾವಿ ಎಂದು ಪರಿಗಣಿಸತಕ್ಕದ್ದು.

3. ಒಂದು ವೇಳೆ ಬಾವಿಯು ಮಳೆ ಇತ್ಯಾದಿ ಕಾರಣಗಳಿಂದ ಮುಚ್ಚಿಹೋಗಿದ್ದು, ಭೌತಿಕವಾಗಿ ಪರಿಶೀಲಿಸಲು ಸಾಧ್ಯವಾಗದಿದ್ದಲ್ಲಿ ಸಾಲ ಮಂಜೂರಾತಿ ಪೂರ್ವದಲ್ಲಿ ಭೂ ವಿಜ್ಞಾನಿಗಳು ನೀಡಿದ್ದ 'ತಾಂತ್ರಿಕ ಸಾಧ್ಯತಾ ವರದಿ' (Technical Feasibility Report), ಸಾಲದ ಖಾತೆಗಳು, ಬಾವಿಯನ್ನು ತೋಡಲಾದ ಬಗ್ಗೆ ಪುರಾವೆಗಳಾಗಿ ಲಭ್ಯ ದಾಖಲಾತಿಗಳನ್ನು ಪರಿಶೀಲಿಸಿ ಸ್ಥಳೀಯವಾಗಿ ಜಮೀನಿನ ಆಸುಪಾಸಿನಲ್ಲಿರುವ ಕನಿಷ್ಠ 4 ಮಂದಿ ರೈತರ ಸಮಕ್ಷಮ ವಿಫಲ ಬಾವಿಯನ್ನು ತೋಡಲ್ಪಟ್ಟಿರುವ ಬಗ್ಗೆ ಪಂಚನಾಮೆ ಮಾಡಿ ಟಿಪ್ಪಣಿ ಲಗತ್ತಿಸಿ ವಿಫಲ ತೋಡುಬಾವಿ ದೃಢೀಕರಣಗಳನ್ನು ನೀಡುವುದು.
4. ವಿಫಲ ತೋಡು ಬಾವಿ ಪರಿಹಾರ ಯೋಜನೆಯಡಿ ಏಕಕಾಲಿಕ ಪರಿಹಾರ ಕ್ರಮವಾಗಿ ಅಸಲು ಮತ್ತು ಬಡ್ಡಿ ಮನ್ನಾ ಮಾಡಲು ಉದ್ದೇಶಿಸಲಾಗಿರುವುದರಿಂದ, ಪರಿಹಾರ ಕೋರಿ ಸಲ್ಲಿಕೆಯಾಗಿರುವ ಅರ್ಜಿಗಳ ದೃಢೀಕರಣಗಳನ್ನು ತ್ರಿಸದಸ್ಯ ಸಮಿತಿಯು ತುರ್ತಾಗಿ ದಾಖಲಾತಿಗಳನ್ನು ಪರಿಶೀಲಿಸಿ, ದಿನಾಂಕ:15.02.2016 ರೊಳಗೆ ವ್ಯವಸ್ಥಾಪಕರು, ಪಿಕಾರ್ಡ್ ಬ್ಯಾಂಕ್ ಇವರಿಗೆ ನೀಡತಕ್ಕದ್ದು.
5. ಪಿಕಾರ್ಡ್ ಬ್ಯಾಂಕ್‌ಗಳ ವ್ಯವಸ್ಥಾಪಕರು ಈ ಯೋಜನೆ ಅನುಷ್ಠಾನಕ್ಕಾಗಿ ದೃಢೀಕರಣ ಪತ್ರ ಪಡೆಯಲು ತ್ರಿಸದಸ್ಯ ಸಮಿತಿಗೆ ಸಹಕಾರ ನೀಡಿ ಯೋಜನೆ ಅನುಷ್ಠಾನಕ್ಕೆ ಎಲ್ಲಾ ಅಗತ್ಯ ಕ್ರಮವಿಡತಕ್ಕದ್ದು.
6. ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಎಲ್ಲಾ ಮುನ್ನೆಚ್ಚರಿಕೆ ಕ್ರಮಗಳನ್ನು ವಹಿಸತಕ್ಕದ್ದು. ಈ ಯೋಜನೆಯಲ್ಲಿ ಯಾವುದೇ ಲೋಪಗಳಾಗದಂತೆ ಕ್ರಮವಹಿಸಿ, ಕಾಲಕಾಲಕ್ಕೆ ಪಿಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕರಿಗೆ ಸೂಚನೆ ನೀಡಲು, ಅಗತ್ಯ ಪ್ರಪತ್ರ ಹಾಗೂ ದಾಖಲೆಗಳು ಸಲ್ಲಿಕೆಯಾಗುವಂತೆ ಕ್ರಮವಹಿಸುವುದು.

ಈ ಆದೇಶವನ್ನು ಸಚಿವ ಸಂಪುಟ ವಿಷಯ ಸಂಖ್ಯೆ: ಸಿ:606:2015, ದಿನಾಂಕ:19.11.2015ರ ನಿರ್ಣಯದ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 364 ವೆಚ್ಚ-2/2015, ದಿನಾಂಕ:19.12.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

PR. 45

SC.50

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರ ವಿರುದ್ಧದ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 08 ಸೇಇವಿ 2014, ದಿನಾಂಕ:16–06–2014.
2 ನೋಟೀಸ್ ಸಂಖ್ಯೆ ಸಿಆಸುಇ 08 ಸೇಇವಿ 2014, ದಿನಾಂಕ:24–12–2014.
3 ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 08 ಸೇಇವಿ 2014, ದಿನಾಂಕ:13–01–2015.
4 ಅಧಿಕಾರಿಯವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 14–05–2015.

**ಪ್ರಸ್ತಾವನೆ :**

ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಈ ಹಿಂದೆ ಅಧೀನ ಕಾರ್ಯದರ್ಶಿ ಕನ್ನಡ & ಸಂಸ್ಕೃತಿ ಇಲಾಖೆ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿರುವ ಈ ಕೆಳಕಂಡ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದನ್ವಯ ಸದರಿ ಅಧಿಕಾರಿಯ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿಯಿಟ್ಟು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

- ಪುತ್ತೂರಿನಲ್ಲಿರುವ ಡಾ|| ಶಿವರಾಮ ಕಾರಂತರ ಬಾಲವನದಲ್ಲಿರುವ ಆರ್ಟ್ ಗ್ಯಾಲರಿಯ ಮೇಲ್ಛಾವಣಿ ಮತ್ತು ಕಾನ್ಫರೆನ್ಸ್ ಹಾಲ್ ನಿರ್ಮಾಣ ಕಾಮಗಾರಿಗೆ ಅನುದಾನ ಬಿಡುಗಡೆಗೊಳಿಸುವಂತೆ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರು ಅನುಮೋದಿಸಿದ್ದರೂ ಸಹ ಅನುದಾನವನ್ನು ಬಿಡುಗಡೆಗೊಳಿಸದೆ ಪ್ರಸಕ್ತ ಸಾಲಿನಲ್ಲಿ ಅನುದಾನ ಇಲ್ಲದೇ ಇರುವುದರಿಂದ ವಿಲೇ ಮಾಡಬಹುದಾಗಿದೆ ಎಂದು ಮೇಲಧಿಕಾರಿಗಳ ಅನುಮೋದನೆಯನ್ನು ಪಡೆಯದೆಯೇ ಅಧೀನ ಕಾರ್ಯದರ್ಶಿ ಹಂತದಲ್ಲಿಯೇ ತೀರ್ಮಾನ ಕೈಗೊಂಡಿರುವುದು.
- ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಪಕಾರ್ಯದರ್ಶಿಯವರು ಕಡತ ಸಂಖ್ಯೆ ಕಸಂವಾ 345 ಕಸಧ 2014ರಲ್ಲಿ ರಂಗ ಮನೆ, ಸಾಂಸ್ಕೃತಿಕ ಕಲಾ ಕೇಂದ್ರ, ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ ಈ ಸಂಸ್ಥೆಗೆ 2013–14ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ₹.3.00 ಲಕ್ಷಗಳ ಧನ ಸಹಾಯವನ್ನು ನಿಗಧಿಪಡಿಸಲಾಗಿದ್ದು, ಇದರಲ್ಲಿ ₹. 2.00 ಲಕ್ಷಗಳನ್ನು ಸರ್ಕಾರದ ಆದೇಶ ಸಂಖ್ಯೆ ಕಸಂವಾ 345 ಕಸಧ 2014, ದಿನಾಂಕ11–3–2014ರಲ್ಲಿ ಬಿಡುಗಡೆ ಮಾಡಿದ್ದು, ಬಾಕಿ ಉಳಿದಿರುವ ₹ 1.00 ಲಕ್ಷಗಳನ್ನು ಸದರಿ ಸಂಸ್ಥೆಗೆ ಮಂಜೂರು ಮಾಡಿ

ಘಟನೋತ್ತರ ಅನುಮೋದನೆಗಾಗಿ ಕಡತ ಸಲ್ಲಿಸುವಂತೆ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿಯವರು ದೂರವಾಣಿ ಮುಖೇನ ಸೂಚಿಸಿರುವುದರಿಂದ ಕಡತವನ್ನು ಅನುಮೋದನೆಗಾಗಿ ಮಂಡಿಸಿರುವುದಾಗಿ ಟಿಪ್ಪಣಿಯನ್ನು ಮಂಡಿಸಿದ್ದು, ಈ ಕಂಡಿಕೆಯನ್ನು ಇಲಾಖಾ ಪ್ರಧಾನ ಕಾರ್ಯದರ್ಶಿಯವರು ದಿನಾಂಕ: 24–3–2014ರಂದೇ ಅನುಮೋದಿಸಿದ್ದರೂ ಸಹ ಈ ಬಗ್ಗೆ ಸರ್ಕಾರಿ ಆದೇಶವನ್ನು ಹೊರಡಿಸದೆ ಲೆಕ್ಕಶೀರ್ಷಿಕೆಯಡಿ ಅನುದಾನ ಲಭ್ಯವಿಲ್ಲದ ಕಾರಣ ವಿಲೇ ಇಡಬಹುದಾಗಿದೆ ಎಂಬ ತೀರ್ಮಾನವನ್ನು ಮೇಲಧಿಕಾರಿಗಳ ಗಮನಕ್ಕೆ ತರದೇ ಅಧೀನ ಕಾರ್ಯದರ್ಶಿ ಹಂತದಲ್ಲಿಯೇ ತೀರ್ಮಾನ ತೆಗೆದುಕೊಂಡಿರುವುದು.

- ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿವಿಧ ಸಂಘ ಸಂಸ್ಥೆಗಳಿಗೆ ಧನ ಸಹಾಯ ಮಂಜೂರಾತಿ ಮಾಡಿದ್ದ ಆದೇಶದಲ್ಲಿ ನಮೂದಿಸಲಾಗಿದ್ದ ಲೆಕ್ಕಶೀರ್ಷಿಕೆಯಲ್ಲಿ ಅನುದಾನ ಲಭ್ಯವಿಲ್ಲವೆಂಬ ಕಾರಣಕ್ಕಾಗಿ ಸದರಿ ಅನುದಾನವನ್ನು ಮತ್ತೊಂದು ಲೆಕ್ಕಶೀರ್ಷಿಕೆಯಲ್ಲಿ ಮಂಜೂರು ಮಾಡುವ ಬಗ್ಗೆ ಒಟ್ಟಾರೆ 22 ತಿದ್ದುಪಡಿ ಆದೇಶಗಳನ್ನು ಆರೋಪಿತ ಅಧಿಕಾರಿಯವರು ಹೊರಡಿಸಿದ್ದು, ಈ ತಿದ್ದುಪಡಿ ಆದೇಶಗಳನ್ನು ಹೊರಡಿಸುವಾಗ ಮೇಲಧಿಕಾರಿಗಳ ಅನುಮೋದನೆಯನ್ನು ಪಡೆಯದೆ ಹಾಗೂ ಕೆಲವು ಸಂದರ್ಭಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು / ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆಯಬೇಕಾಗಿತ್ತೇ ಎಂಬುದನ್ನು ಸಹ ಪರಿಶೀಲಿಸದೇ ತಮ್ಮ ಹಂತದಲ್ಲಿಯೇ ನೇರವಾಗಿ ತಿದ್ದುಪಡಿ ಆದೇಶವನ್ನು ಹೊರಡಿಸಿರುವ ಮೂಲಕ ಕರ್ತವ್ಯ ಲೋಪ ಎಸಗಿರುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 24–12–2014ರ ನೋಟೀಸ್‌ನೊಂದಿಗೆ ಆರೋಪಿತ ಅಧಿಕಾರಿಯವರಿಗೆ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು, 1957ರ ನಿಯಮ 11 & 11–(4)ರಡಿ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿರುತ್ತದೆ. ಮೇಲೆ ಓದಲಾದ ಕ್ರಮಸಂಖ್ಯೆ (3)ರ ದಿನಾಂಕ 13–01–2015ರ ಸರ್ಕಾರದ ಆದೇಶದ್ವಯ ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಇವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿ ಇರಿಸಿ ಸರ್ಕಾರಿ ಸೇವೆಗೆ ಪುನರ್‌ಸ್ಥಾಪಿಸಿ ಆದೇಶಿಸಲಾಗಿರುತ್ತದೆ.

ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ ಇವರು ಮೇಲೆ ಓದಲಾದ ಕ್ರಮಸಂಖ್ಯೆ 4ರ ದಿನಾಂಕ 14–05–2015ರ ಮನವಿಯೊಂದಿಗೆ ತಮ್ಮ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ತಮ್ಮ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ತಮ್ಮಿಂದ ಯಾವುದೇ ಕರ್ತವ್ಯ ಲೋಪ ಆಗಿರುವುದಿಲ್ಲವೆಂದೂ, ಕನ್ನಡ & ಸಂಸ್ಕೃತಿ ಇಲಾಖೆಯ ಅಂದಿನ ಉಪ ಕಾರ್ಯದರ್ಶಿಯವರನ್ನೇ ಇದಕ್ಕೆ ಜವಾಬ್ದಾರರನ್ನಾಗಿ ಮಾಡಬೇಕೆಂದು ತಿಳಿಸಿದ್ದು ಇದಕ್ಕೆ ಪೂರಕವಾದ ಯಾವುದೇ ದಾಖಲೆಗಳನ್ನು ತಮ್ಮ ಮನವಿಯೊಂದಿಗೆ ಸಲ್ಲಿಸದೇ ಇರುವುದರಿಂದ ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್ ಇವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ತೀರ್ಮಾನಿಸಿದ ಸರ್ಕಾರವು ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖಾ ವಿಚಾರಣೆಯನ್ನು ಮುಂದುವರಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 8 ಸೇಇವಿ 2014, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ, ಶ್ರೀ ಸಿದ್ರಾಮಪ್ಪ ಹೆಚ್. ತಳವಾರ್, ಸರ್ಕಾರದ ಅಧೀನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರು ಈ ಹಿಂದೆ ಅಧೀನ ಕಾರ್ಯದರ್ಶಿ ಕನ್ನಡ & ಸಂಸ್ಕೃತಿ ಇಲಾಖೆ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿರುವ ಆರೋಪಗಳ ಕುರಿತು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 ಮತ್ತು 11–'ಎ'ರೊಡನೆ ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಎಂ.ಎಸ್.ಹೆಗ್ಡೆ ನಗ್ಗೆ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, [ಟಿ.ಎಫ್–4, ಸೂರ್ಯ ಕ್ಲಾಸಿಕ್, 4ನೇ ಮುಖ್ಯ ರಸ್ತೆ, ಶ್ರೀ ರಾಮಮಂದಿರ ಬೀದಿ, ಯಲಚೇನಹಳ್ಳಿ ಬಸ್ ಸ್ಟಾಪ್ ಹತ್ತಿರ, ಕನಕಪುರ ರಸ್ತೆ, ಬೆಂಗಳೂರು–78] ಇವರನ್ನು ವಿಚಾರಣಾಧಿಕಾರಿಯಾಗಿಯೂ ಮತ್ತು ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11(5)(ಸಿ) ರನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ & ಸಂಸ್ಕೃತಿ ಇಲಾಖೆ(ಸಂಸ್ಕೃತಿ) ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಯವರಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿ ಒದಗಿಸಲು ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ & ಸಂಸ್ಕೃತಿ ಇಲಾಖೆ (ಸಂಸ್ಕೃತಿ) ಇವರು ಕ್ರಮ ಕೈಗೊಳ್ಳತಕ್ಕದ್ದು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರು ನಿಯಮಾನುಸಾರ ಸಂಚಿತ ಸಂಭಾವನೆಯನ್ನು ಹಾಗೂ ಮಂಡನಾಧಿಕಾರಿಯವರು ನಿಯಮಾನುಸಾರ ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಬಗ್ಗೆ ಸ್ಪಷ್ಟ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗೆ ಅನುದಾನ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** **1)** ಸರ್ಕಾರದ ಆದೇಶ ಸಂಖ್ಯೆ:ಸಿಇ 116 ಸಂಮಾಸ 2015, 09–09–2015.

**2)** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಓಟಿಎಸ್–2/15/ಲ್ಯಾಂಪ್ಸ್/2015–16, ದಿ:19–11–2015 ಹಾಗೂ ದಿನಾಂಕ:15–12–2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಮೂಡಿಗೆರೆ, ಭಾಗಮಂಡಲ ಹಾಗೂ ಕೊಪ್ಪ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮೊದಲನೇ ಹಾಗೂ ಎರಡನೇ ತ್ರೈಮಾಸಿಕದ ಕಂತು ಒಟ್ಟು ₹.19.50 ಲಕ್ಷ ಬಿಡುಗಡೆಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (2)ರ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಗಳಲ್ಲಿ 2015–16ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆಯ ಮೂಲ ಸೌಕರ್ಯ ಸ್ಥಾಪನೆಗೆ **ಲೆಕ್ಕ ಶೀರ್ಷಿಕೆ 2425–00–108–0–39, 423** ಗಿರಿಜನ ಉಪ ಯೋಜನೆಯಲ್ಲಿ ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಹಳಿಯಾಳ, ಉತ್ತರ ಕನ್ನಡ ಜಿಲ್ಲೆ ಇದಕ್ಕೆ ₹. 11.00 ಲಕ್ಷಗಳನ್ನು ಜೇನು ಸಂಸ್ಕರಣ ಘಟಕ ಸ್ಥಾಪನೆಗಾಗಿ ಬಿಡುಗಡೆ ಮಾಡುವಂತೆ ಕೋರಿ ನಿಬಂಧಕರು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 116 ಸಂಮಾಸ 2015, ದಿನಾಂಕ:26–12–2015.**

ರಾಜ್ಯ ಯೋಜನೆಯಡಿಯಲ್ಲಿ 2015–16ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆಯ ಮೂಲ ಸೌಕರ್ಯ ಸ್ಥಾಪನೆಗೆ **ಲೆಕ್ಕ ಶೀರ್ಷಿಕೆ 2425–00–108–0–39,** ಗಿರಿಜನ ಉಪ ಯೋಜನೆ **423** ರಡಿಯಲ್ಲಿ **₹. 50.00** ಲಕ್ಷಗಳ ಆಯ–ವ್ಯಯ ಅವಕಾಶ ಕಲ್ಪಿಸಿದ್ದು, ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಹಳಿಯಾಳ, ಉತ್ತರ ಕನ್ನಡ ಜಿಲ್ಲೆ ಇದಕ್ಕೆ ಮೊದಲನೇ ಹಾಗೂ ಎರಡನೇ ತ್ರೈಮಾಸಿದ ಒಟ್ಟು ಶೇ 50 ರಷ್ಟು ಅಂದರೆ **₹. 5.50 ಲಕ್ಷಗಳನ್ನು (ಐದು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ)** ಬಿಡುಗಡೆಗೊಳಿಸಿ ಆದೇಶಿಸಿದೆ.

**ಷರತ್ತುಗಳು :**

1. ಈ ಅನುದಾನ ವೆಚ್ಚವನ್ನು **2015–16ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–39,** ಗಿರಿಜನ ಉಪಯೋಜನೆ **423** ರಡಿಯಲ್ಲಿ ಭರಿಸತಕ್ಕದ್ದು.
2. ಸಂಬಂಧಿಸಿದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಯೋಜನೆಯಲ್ಲಿ ಪಡೆದ ಹಣವನ್ನು ಯೋಜನೆಯ ಪ್ರಗತಿಗನುಗುಣವಾಗಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಬಿಡುಗಡೆ ಮಾಡುವುದು.
3. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸುವ ಷರತ್ತಿಗೊಳಪಟ್ಟು ಕಾಮಗಾರಿಗಳನ್ನು ನಿರ್ವಹಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸುವ ಷರತ್ತಿಗೊಳಪಟ್ಟು ಕಾಮಗಾರಿಗಳನ್ನು ನಿರ್ವಹಿಸುವುದು.
5. ಸಹಕಾರ ಸಂಘಗಳ ನಿಬಂಧಕರು ಲ್ಯಾಂಪ್ಸ್ ಸಹಕಾರ ಸಂಘಗಳು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು, ಮತ್ತು ಅನುದಾನದ ವಿನಿಯೋಗದ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಪಡೆದು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಮಂಜೂರು ಮಾಡಿದ ಅನುದಾನ **₹. 5.50 ಲಕ್ಷ (ಐದು ಲಕ್ಷ ಐವತ್ತು ಸಾವಿರ ರೂಪಾಯಿಗಳನ್ನು ಮಾತ್ರ)** ಗಳನ್ನು ಸಂಬಂಧಿಸಿದ ಲ್ಯಾಂಪ್ಸ್ ಸಹಕಾರ ಸಂಘಗಳ ವತಿಯಿಂದ **Pay receipts** ಪಡೆದು, ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ಕನ್ನಡ ಜಿಲ್ಲೆ ಇವರ ಮೇಲು ರುಜು (**Counter sign**) ಪಡೆದು ಸದರಿ ಅನುದಾನದ ಮೊತ್ತವನ್ನು ಪಾವತಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕಾರವಾರ ಉಪವಿಭಾಗದವರಿಗೆ ಅಧಿಕಾರ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ **ಆದೇಶ ಸಂಖ್ಯೆ:ಎಫ್‌ಡಿ 04 ಟಿಎಫ್‌ಪಿ 2015, ದಿನಾಂಕ:09–10–2015** ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ **ಸಂಖ್ಯೆ ಸಇ 158 ಆಂಆಸ 2015, ದಿನಾಂಕ:23–12–2015**ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 53**
**SC.50**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆಗೆ ಅನುದಾನ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಸಿಇ 116 ಸಂಮಾಸ 2015, 09–09–2015 ಹಾಗೂ ದಿನಾಂಕ:26–12–2015.

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್–2/15/ಲ್ಯಾಂಪ್ಸ್/2015–16, ದಿ:19–11–2015 ಹಾಗೂ ದಿನಾಂಕ:15–12–2015.

ಪ್ರಸ್ತಾವನೆ :

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2015–16ನೇ ಸಾಲಿನ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲ ಸೌಕರ್ಯ ಸ್ಥಾಪನೆಗಾಗಿ ಲೆಕ್ಕ ಶೀರ್ಷಿಕೆ 2425–00–108–0–39, 423 ಗಿರಿಜನ ಉಪಯೋಜನೆಯಡಿಯಲ್ಲಿ ₹. 50.00 ಲಕ್ಷಗಳ ಅವಕಾಶ ಕಲ್ಪಿಸಿದ್ದು, ಅದರಂತೆ ದಿನಾಂಕ:09–09–2015 ರ ಸರ್ಕಾರದ ಆದೇಶದಲ್ಲಿ ಮೂಡಿಗೆರೆ, ಭಾಗಮಂಡಲ ಹಾಗೂ ಕೊಪ್ಪ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮೊದಲನೇ ಹಾಗೂ ಎರಡನೇ ತ್ರೈಮಾಸಿಕದ ಕಂತು ₹. 19.50 ಲಕ್ಷ ಹಾಗೂ ದಿನಾಂಕ:26–12–2015 ರ ಸರ್ಕಾರದ ಆದೇಶದಲ್ಲಿ ಹಳಿಯಾಳ ಲ್ಯಾಂಪ್ಸ್ ಸಹಕಾರ ಸಂಘಕ್ಕೆ ₹.5.50 ಲಕ್ಷ ಹೀಗೆ ಒಟ್ಟು ₹. 25.00 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಪ್ರಸ್ತುತ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯಲ್ಲಿ ಈ ಕೆಳಕಂಡ ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮೂರು ಮತ್ತು ನಾಲ್ಕನೇ ತ್ರೈಮಾಸಿಕದಲ್ಲಿ ಬಿಡುಗಡೆಗೊಳಿಸಲು ಬಾಕಿ ಇರುವ ರೂ 25.00 ಲಕ್ಷಗಳನ್ನು ಬಿಡುಗಡೆಗೊಳಿಸಲು ಕೋರಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

| ಕ್ರಮ ಸಂಖ್ಯೆ | ಸಂಘದ ಹೆಸರು | ಬಿಡುಗಡೆಗೊಳಿಸಲು ಕೋರಿದ ಮೊತ್ತ ₹. (ಲಕ್ಷಗಳಲ್ಲಿ) |
|---|---|---|
| 01 | ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ. | 5–50 |
| 02 | ಮಡಿಕೇರಿ ತಾಲ್ಲೂಕು ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಭಾಗಮಂಡಲ, ಕೊಡಗು ಜಿಲ್ಲೆ | 10–00 |
| 03 | ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ., ನಿ., ಕೊಪ್ಪ, ಚಿಕ್ಕಮಗಳೂರು ಜಿಲ್ಲೆ | 4–00 |
| 04 | ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಹಳಿಯಾಳ, ಉತ್ತರ ಕನ್ನಡ ಜಿಲ್ಲೆ | 5–50 |
| | **ಒಟ್ಟು** | **25–00** |

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 116 ಸಂಮಾಸ 2015, ದಿನಾಂಕ:04–01–2016.**

ರಾಜ್ಯ ಯೋಜನೆಯಡಿಯಲ್ಲಿ 2015–16ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆಯ ಮೂಲ ಸೌಕರ್ಯ ಸ್ಥಾಪನೆಗೆ **ಲೆಕ್ಕ ಶೀರ್ಷಿಕೆ 2425–00–108–0–39**, ಗಿರಿಜನ ಉಪ ಯೋಜನೆ **423** ರಡಿಯಲ್ಲಿ **₹.50.00** ಲಕ್ಷಗಳ ಆಯ–ವ್ಯಯ ಅವಕಾಶ ಕಲ್ಪಿಸಲಾಗಿದ್ದು ಈಗಾಗಲೇ ಮೊದಲನೇ ಹಾಗೂ ಎರಡನೇ ತ್ರೈಮಾಸಿಕ ಅನುದಾನವಾಗಿ ₹.25.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ. ಮೂರನೆ ಹಾಗೂ ಕೊನೆಯ ನಾಲ್ಕನೇ ತ್ರೈಮಾಸಿಕ ಕಂತು **₹. 25.00 ಲಕ್ಷಗಳನ್ನು (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ)** ಈ ಕೆಳಕಂಡ ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿ ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಲ್ಯಾಂಪ್ಸ್ ಸಹಕಾರ ಸಂಘಗಳ ಹೆಸರು | ಮೂರನೆ ಹಾಗೂ ನಾಲ್ಕನೇ ತ್ರೈಮಾಸಿಕದಲ್ಲಿ ಬಿಡುಗಡೆಗೊಳಿಸಿದ ಮೊತ್ತ ₹. (ಲಕ್ಷಗಳಲ್ಲಿ) |
|---|---|---|
| 01 | ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ. | **5–50** |
| 02 | ಮಡಿಕೇರಿ ತಾಲ್ಲೂಕು ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಭಾಗಮಂಡಲ, ಕೊಡಗು ಜಿಲ್ಲೆ | **10–00** |
| 03 | ಪರಿಶಿಷ್ಟ ವರ್ಗಗಳ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ., ನಿ., ಕೊಪ್ಪ, ಚಿಕ್ಕಮಗಳೂರು ಜಿಲ್ಲೆ | **4–00** |
| 04 | ವನಶ್ರೀ ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಹಳಿಯಾಳ, ಉತ್ತರ ಕನ್ನಡ ಜಿಲ್ಲೆ | **5–50** |
| | **ಒಟ್ಟು** | **25–00** |

**ಷರತ್ತುಗಳು :**

1. ಈ ಅನುದಾನ ವೆಚ್ಚವನ್ನು **2015–16ನೇ ಸಾಲಿನ ಲೆಕ್ಕ ಶೀರ್ಷಿಕೆ 2425–00–108–0–39,** ಗಿರಿಜನ ಉಪಯೋಜನೆ **423** ರಡಿಯಲ್ಲಿ ಭರಿಸತಕ್ಕದ್ದು.
2. ಸಂಬಂಧಿಸಿದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಯೋಜನೆಯಲ್ಲಿ ಪಡೆದ ಹಣವನ್ನು ಯೋಜನೆಯ ಪ್ರಗತಿಗನುಗುಣವಾಗಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಬಿಡುಗಡೆ ಮಾಡುವುದು.
3. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸುವ ಷರತ್ತಿಗೊಳಪಟ್ಟು ಕಾಮಗಾರಿಗಳನ್ನು ನಿರ್ವಹಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸುವ ಷರತ್ತಿಗೊಳಪಟ್ಟು ಕಾಮಗಾರಿಗಳನ್ನು ನಿರ್ವಹಿಸುವುದು.
5. ಸಹಕಾರ ಸಂಘಗಳ ನಿಬಂಧಕರು ಲ್ಯಾಂಪ್ಸ್ ಸಹಕಾರ ಸಂಘಗಳು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು, ಮತ್ತು ಅನುದಾನದ ವಿನಿಯೋಗದ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಪಡೆದು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಮಂಜೂರು ಮಾಡಿದ ಅನುದಾನ **₹.25.00 ಲಕ್ಷ (ಇಪ್ಪತ್ತೈದು ಲಕ್ಷ ಸಾವಿರ ರೂಪಾಯಿಗಳನ್ನು ಮಾತ್ರ)** ಗಳನ್ನು ಸಂಬಂಧಿಸಿದ ಲ್ಯಾಂಪ್ಸ್ ಸಹಕಾರ ಸಂಘಗಳ ವತಿಯಿಂದ **Pay receipts** ಪಡೆದು, ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ಕನ್ನಡ ಜಿಲ್ಲೆ ಇವರ ಮೇಲು ರುಜು (**Counter sign**) ಪಡೆದು ಸದರಿ ಅನುದಾನದ ಮೊತ್ತವನ್ನು ಪಾವತಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಮಗಳೂರು, ಮಡಿಕೇರಿ ಹಾಗೂ ಕಾರವಾರ ಉಪವಿಭಾಗದವರಿಗೆ ಅಧಿಕಾರ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ **ಆದೇಶ ಸಂಖ್ಯೆ:ಎಫ್‌ಡಿ 04 ಟಿಎಫ್‌ಪಿ 2015, ದಿನಾಂಕ:09–10–2015** ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ **ಸಂಖ್ಯೆ ಸಇ 158 ಆಂಆಸ 2015, ದಿನಾಂಕ:23–12–2015ರ**ಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 78**
**SC.50**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿನ ಸಹಕಾರ ಇಲಾಖೆಯ ಮುಂದುವರೆದ ಯೋಜನೆಗಳಡಿಯಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆ"ಯಡಿ (ಷೇರು ಬಂಡವಾಳ ರೂಪದಲ್ಲಿ) ಸರ್ಕಾರದಿಂದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ:ಸಇ 22 ಆಂಆಸ 2015, ದಿ:08–05–2015.
2) ಸರ್ಕಾರಿ ಆದೇಶ ಸಂಖ್ಯೆ:ಸಿಒ 118 ಸಂಮಾಸ 2015, ದಿ:19–11–2015.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ಎಂಕೆಟಿ–1/ 67/2015–16,ದಿ:01–11–2015 ಹಾಗೂ ಪತ್ರ ಸಂಖ್ಯೆ:ಆರ್‌ಸಿಎಸ್/ ಎಂಕೆಟಿ–1/104/2015–16 ದಿ:22–12–2015.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಹಕಾರ ಇಲಾಖೆಯಿಂದ ಅನುಷ್ಠಾನಗೊಳಿಸಲ್ಪಡುತ್ತಿರುವ ಯೋಜನೆಗಳಡಿ 2015–16 ನೇ ಸಾಲಿನಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಗ್ರಾಹಕರ ಮಾರುಕಟ್ಟೆ ಮತ್ತು ಸಂಸ್ಕರಣ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯನ್ನು ಮುಂದುವರೆಸಿ ಆದೇಶಿಸಲಾಗಿರುತ್ತದೆ. 2015–16ನೇ ಸಾಲಿಗೆ ₹. 140.00 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಸರ್ಕಾರದಿಂದ ಷೇರು ಬಂಡವಾಳ ನೆರವು ನೀಡುವ ಯೋಜನೆಯ ಆದೇಶವನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವೆಗಳಲ್ಲಿ 2015–16ನೇ ಸಾಲಿಗೆ "ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆ" (ಷೇರು ಬಂಡವಾಳ ರೂಪದಲ್ಲಿ) ಯಲ್ಲಿ ಅರ್ಹ ಸಹಕಾರ ಸಂಘಗಳಿಗೆ ಷೇರು ಬಂಡವಾಳದ ನೆರವನ್ನು ನೀಡುವುದಕ್ಕಾಗಿ **ಲೆಕ್ಕ ಶೀರ್ಷಿಕೆ 4425–00–108–0–57–100 ರಡಿಯಲ್ಲಿ** ಆಯವ್ಯಯದಲ್ಲಿ **₹. 140.00** ಲಕ್ಷಗಳನ್ನು ಒದಗಿಸಿದ್ದು, ದಿನಾಂಕ:27–11–2015 ರಂದು ಸಹಕಾರ ಸಂಘಗಳ ನಿಬಂಧಕರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸ್ವೀಕೃತವಾದ ಎಲ್ಲಾ ಸಹಕಾರ ಸಂಘಗಳ ಪ್ರಸ್ತಾವೆಗಳನ್ನು ಪರಿಶೀಲಿಸಿ, ದಿನಾಂಕ:19–11–2015 ರ ಪರಿಷ್ಕೃತ ಆದೇಶದ ಅನುಸಾರ ಈ ಕೆಳಕಂಡ ಹತ್ತು ಸಹಕಾರ ಸಂಘಗಳಿಗೆ ತಲಾ ₹. 10.00 ಲಕ್ಷ (₹. ಹತ್ತು ಲಕ್ಷ) ಆರ್ಥಿಕ ನೆರವನ್ನು ನೀಡಲು ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ವಿವರಗಳು ಈ ಕೆಳಕಂಡಂತಿವೆ.

